ಕಾದಂಬರೀ ಸಂಗ್ರಹ ಗ್ರಂಥಮಾಲಾ ೧೩೮

# ಅರಿಂದಮನ ಸಾಹಸಗಳು

ಡಾ|| ಬಿ. ವಿ. ವೆಂಕಟೇಶಯ್ಯ ಬಿ.ಎ., ಎಂ.ಬಿ.ಬಿ.ಎಸ್.,



1944

ಶ್ರೀಕಂಠೇಶ್ವರ ಪ್ರೆಸ್, ಚಾಮರಾಜನಗರ

ಬೆಲೆ ೦—೬—೦

# ಮುನ್ನುಡಿ

---

ವಾಚಕವೃಂದ !

"ಆನಂದನ ಹತ್ಯಾಕಾರಿ" ಎಂಬ ಈ ಪ್ರಥಮ ಪುಷ್ಪವನ್ನು ತಮ್ಮ ಅಡಿದಾವರೆಗಳಲ್ಲಿ ಅರ್ಪಿಸಿದ್ದೇನೆ. ಇದು ಪ್ರಸಿದ್ಧ ಗ್ರಂಥಕರ್ತರಾದ ಸರ್ ಆರ್ಥರ್ ಕಾನಂಡಾಯಿಲರೆಂಬುವರು ಆಂಗ್ಲೇಯ ಭಾಷೆಯಲ್ಲಿ ರಚಿಸಿರುವುದರ ಆಧಾರದ ಮೇಲೆ ಬರೆದುದಾಗಿದೆ. ಇಂತಹ ಪತ್ತೇದಾರಿಯ ಕಾದಂಬರಿಗಳನ್ನು ಇನ್ನೂ ತಮ್ಮ ಚರಣಗಳ ಮುಂದಿಟ್ಟು ಸೇವೆ ಮಾಡಬೇಕೆಂಬ ದೊಡ್ಡ ಬಯಕೆಯೇನೋ ಇದೆ. ಆದರೆ, ತಾವು ಯಾವ ಬಗೆಯಲ್ಲಿ ಆದರಿಸುವಿರೆಂಬುದನ್ನು ನೋಡಿ ಮುಂದಿನ ಕರ್ತವ್ಯದಲ್ಲುದ್ಯುಕ್ತನಾಗಬೇಕಾಗುವುದು.

ಈ ಪುಷ್ಪವನ್ನು ತಮ್ಮ ಅಮೋಘವಾದ ಮಾಸಪತ್ರಿಕೆಯಲ್ಲಿ ಪ್ರಕಟಿಸಲು ಅಪ್ಪಣೆಯಿತ್ತ ವಚನ ರಚನಾಚತುರ, ಕವಿ ತಿಲಕ ಸಿ. ವೆಂಕಟರಮಣ ಶಾಸ್ತ್ರಿಗಳವರ ಉಪಕಾರವು ಚಿರಸ್ಮರಣೀಯವಾಗಿದೆ.

ಇತಿ,

ತಮ್ಮ ವಿಧೇಯ,

**ಬಿ. ವಿ. ವೆಂಕಟೇಶಯ್ಯ.**

# ಅರಿಂದಮನ ಸಾಹಸಗಳು

ಪುಸ್ತ ೧

# ಆನಂದನ ಹತ್ಯಾಕಾರಿ

## ಉಪಕ್ರಮಣಿಕೆ

ಸಂಧ್ಯಾ ಸಮಯವು ಮುಗಿದು ರಾತ್ರಿಯು ಪ್ರಾರಂಭಿಸುತ್ತಿದ್ದ ವೇಳೆಗೆ ಉದ್ಯಾನವನದಲ್ಲಿ ಮುದುಕನೊಬ್ಬನು ಮುದುಕಿಯೊಬ್ಬಳೊಡನೆ ಮಾತನಾಡುತ್ತಿದನು.

ಮುದುಕ—ನಾನು ಹೇಳಿದಂತೆಲ್ಲವನ್ನೂ ನಡೆಸಿರುವೆಯಾ ?

ಮುದುಕಿ—ನಡೆಸಿರುವೆನು.

ಮುದುಕ—ಸ್ವಲ್ಪವೂ ವ್ಯತ್ಯಾಸವಿಲ್ಲದೆ ?

ಮುದುಕಿ—ಅಲ್ಲದೆ ಮತ್ತೇನು ? ಅದಿರಲಿ, ನೀನು ಹೀಗೆ ಮುಖವನ್ನು ಮುಚ್ಚಿಟ್ಟುಕೊಂಡು ಬರುವುದನ್ನು ಯಾರಾದರೂ ನೋಡಿದರೇನು ಮಾಡುವೆ ?

ಮುದುಕ—ಯಾರೂ ನೋಡಿಲ್ಲ. ಇನ್ನು ಕೆಲವು ದಿನಗಳಾದರೆ ನಮಗೆ ಯಾವ ಭಯವೂ ಇಲ್ಲ.

ಮುದುಕಿ—ಆ ಅರಿಂದಮನಿಗೇನಾದರೂ ತಿಳಿದರೆ ನಿನ್ನ ಪರಿಣಾಮವಾಯಿತೆಂದು ತಿಳಿ.

ಮುದುಕ—(ನಕ್ಕು) ನನ್ನ ರಹಸ್ಯವನ್ನು ಭೇದಿಸಲು ಆ ಅರಿಂದಮನಿಂದಲೂ ಸಾಧ್ಯವಿಲ್ಲ. ಅವನು ಎಷ್ಟು ಹೆಣಗಾಡಿದರೂ ನನ್ನ ರಹಸ್ಯವು ಭೇದಿಸಲ್ಪಡಲಾರದು. ಅಂತಹ ಅಸಾಧ್ಯವಾದ ಉಪಾಯವನ್ನು ಹುಡುಕಿದ್ದೇನೆ. ನೀನು ಮಾತ್ರ ಬಹಳ ಜಾಗರೂಕತೆಯಿಂದಿರಬೇಕು. ಜೋಕೆ ! ಎಳ್ಳಷ್ಟೂ ಸಂಶಯಕ್ಕಾಸ್ಪದವಿರಕೂಡದು.

ಮುದುಕಿ — ಹಾಗೆಯೇ ಆಗಲಿ.

ಮುದುಕನು ಅವಳ ಕಿವಿಯಲ್ಲಿ ಅದೇನನ್ನೋ ಹೇಳಿ " ಒಳ್ಳೆಯದು, ನೀನೀಗ ಹೊರಟುಹೋಗು. ನಾನು ಹೇಳಿದಂತೆ ಹುಷಾರಾಗಿರು." ಎಂದು ಹೇಳಿ ತನ್ನ ಮುಖವನ್ನು ಮುಚ್ಚಿಕೊಂಡು ಉದ್ಯಾನವನದಿಂದ ಹೊರಟು ಹೋದನು. ಮುದುಕಿಯು ಬೇರೊಂದು ಕಡೆಗೆ ತಿರುಗಿ ಹೊರಟು ಹೋದಳು.

ಉದ್ಯಾನದಲ್ಲಿದ್ದ ಮರಗಳ ಮರಮರ ಶಬ್ದಮಾಡುತ್ತಿದ್ದವು. ಸುವಾಸನೆಯಿಂದ ಕೂಡಿದ ಗಾಳಿಯು ಮೆಲ್ಲನೆ ಬೀಸುತ್ತಿದ್ದಿತು. ಉದ್ಯಾನದ ಮಧ್ಯಭಾಗದಲ್ಲಿದ್ದ ಸಣ್ಣ ಪುಷ್ಕರಣಿಯೊಂದರಿಂದ ನೀರು ಮೇಲಕ್ಕೆ ಹಾರಿ ಸುತ್ತಮುತ್ತಲೂ ತುಂತುರು ತುಂತುರಾಗಿ ಬೀಳುತ್ತಿದ್ದಿತು. ಎಲ್ಲಿ ನೋಡಿದರೂ ಶಾಂತಿಯು ನೆಲೆಸಿದ್ದಿತು. ಆ ವೃದ್ಧ ಮತ್ತು ವೃದ್ಧೆಯರ ಹೃದಯದಲ್ಲಿ ಮಾತ್ರ ಪಾಷಾಣವು ನೆಲೆಸಿದ್ದಂತೆ ಬೋಧೆಯಾಗುತ್ತಿದ್ದಿತು.



ಶ್ರೀಃ

# ಅರಿಂದಮನ ಸಾಹಸಗಳು.

ಪುಷ್ಪ ೧

## " ಆನಂದನ ಹತ್ಯಾಕಾರಿ "

ಪತ್ತೇದಾರಿಯ ಕಾದಂಬರಿ.

---

## ಪ್ರಥಮ ಪರಿಚ್ಛೇದ.

---

" ಅರಿಂದಮ ಬಾಬುಗಳು ಮನೆಯಲ್ಲಿರೋಣಾಗಿದೆಯೋ ? "

" ಯಾರದು ? ಓಹೋ ! ಡಾಕ್ಟರರೇ ! ಇದೇನು ಇಂದು ಇಷ್ಟು ಮರ್ಯಾದೆಯಿಂದ ಮಾತನಾಡಿಸೋಣಾಗುತ್ತೆ ? ಪ್ರಕೃತಿಯು ಸರಿಯಾಗಿದೆಯಷ್ಟೆ ? "

" ಭಲೆ ! ಅರಿಂದಮ !! ಡಾಕ್ಟರ ಪ್ರಕೃತಿಯ ವಿಚಾರವಾಗಿಯೇ ಪ್ರಶ್ನೆ ಮಾಡಲಾರಂಭಿಸಿದೆಯಲ್ಲಾ ! ಅದಿರಲಿ. ಕಾರ್ಯಾರ್ಥಿಯಾಗಿ ಎಲ್ಲಾದರೂ ಹೊರಟುಹೋದೆಯೆಂಬ ಭಯದಿಂದ ಇರುವೆಯೋ ಇಲ್ಲವೋ ಎಂದು ಶಂಕಿಸಿ ಹಾಗೆ ಕೇಳಬೇಕಾಯಿತು. ಇತರರೊಡನೆ ಮಾತಾಡುವಾಗಲೂ ನಿನ್ನನ್ನು ಏಕವಚನದಲ್ಲಿ ಸಂಬೋಧಿಸಲೇ ? "

ಮಿತ್ರರಿಬ್ಬರೂ ಅರಿಂದಮ ಬಾಬುವಿನ ಕೊಠಡಿಯನ್ನು ಪ್ರವೇಶಿಸಿದರು ಕಿರುಮನೆಯು ಸುಸಜ್ಜಿತವಾದುದಾಗಿದ್ದಿತು. ಕಿಟಕಿಗಳ ಕನ್ನಡಿಗಳೆಲ್ಲವೂ ಬಹಳ ಸ್ವಚ್ಛಮಾಡಲ್ಪಟ್ಟಿದ್ದುವು. ಕಿರುಮನೆಯ ಮಧ್ಯಭಾಗದಲ್ಲೊಂದು ಸಣ್ಣ ಮೇಜು. ಮೇಜಿನ ಮೇಲೆ ಸಣ್ಣ ಪಾತ್ರೆಯೊಂದರಲ್ಲಿ ಪುಷ್ಪಗಳು ಸ್ಥಿರಗೊಳಿಸಿ ತಮ್ಮ ಮಾಧುರ್ಯವನ್ನು ಸುವಾಸನೆಯ ಮೂಲಕ ಕೊಠಡಿಯಲ್ಲೆಲ್ಲಾ ಪ್ರಸರಿಸುತ್ತಿದ್ದುವು. ಅರಿಂದಮನು ಸಮೀಪದಲ್ಲಿದ್ದ ಕುರ್ಚಿಯ ಮೇಲೆ ಡಾಕ್ಟರ್ ರಾಧಾನಾಥರನ್ನು ಕುಳಿತುಕೊಳ್ಳುವಂತೆ ಹೇಳಿ ತಾನು ಮತ್ತೊಂದಾಸನದ ಮೇಲೆ ಒರಗಿಕೊಂಡು, ಏನು, ರಾಧಾನಾಥ ! ಬಹಳ ದಿನಗಳಿಂದ ಉಪವಾಸವಾಗಿದೆಯೆಂದನು.

ರಾಧಾ—ಅದೇನು, ಹಾಗೆಂದರೆ ?

ಅರಿಂ—ಉಪವಾಸವೆಂದರೆ ಅರ್ಥವಾಗುವುದಿಲ್ಲವೇ ?

ರಾಧಾ - ಅದೇಕೆ ಉಪವಾಸ ? ಅಡಿಗೆಯವನೆಲ್ಲಿ ಹೋಗಿರುವನು ? ನಿನ್ನ

ಮುಖವನ್ನು ನೋಡಿದರೆ ಉಪವಾಸ ಮಾಡಿರುವಂತೆ ಕಾಣುವುದಿಲ್ಲವಲ್ಲಾ !

ಅರಿಂ—ಉಪವಾಸವೆಂದರೆ ಊಟದಲ್ಲಲ್ಲ ! ಕಾರ್ಯದಲ್ಲಿ !

ರಾಧಾ—ಸರಿ, ತಿಳಿಯಿತು. ಅದೇಕೆ ಈ ವಿಲಾಸ ನಗರಿಯಲ್ಲಿ ದುಷ್ಕೃತ್ಯಗಳನ್ನು ನಡೆಸುವವರೆಲ್ಲರೂ ನಾಶವಾಗಿಬಿಟ್ಟರೇ ?

ಅರಿಂ—ಪ್ರಕೃತಕ್ಕೆ ಹಾಗೆಯೇ ಸರಿ.

ರಾಧಾ—ಅದಕ್ಕೆ ನೀನೇ ಕಾರಣನು.

ಅರಿಂ—ಅದು ಹೇಗೆ ?

ರಾಧಾ—ಹೇಗೆಂದರೆ ನೀನೇ ಅರಿಯೆಯಾ ? ಎಂತೆಂತಹ ಗೂಢವಾದ ಕಾರ್ಯಗಳನ್ನೋ ಬಯಲಿಗೆ ತಂದಿರುವೆ. ಯಾರಿಗೂ ತಿಳಿಯದಂತೆ ನಡೆಸಿದ ಹತ್ಯೆಗಳೆಲ್ಲವನ್ನೂ ಪತ್ತೆಮಾಡಿರುವೆ. ನಿನ್ನ ಹೆಸರನ್ನೆತ್ತಿದರೆ ಚೋರರೂ ಕೊಲೆಪಾತಕರೂ ನಡುಗಿಹೋಗುತ್ತಿರುವರು. ಇನ್ನು ಅಂತಹ ಕಾರ್ಯಗಳಿಗೆ ಸ್ಥಳವೇ ಇಲ್ಲ.

ಅರಿಂ—ಹಾಗೆನ್ನಬೇಡ. ಒಂದು ವೇಳೆ ಹಾಗೆ ಕೆಟ್ಟ ಕೃತ್ಯಗಳನ್ನು ನಡೆಸುವವರೆಲ್ಲರೂ ಮಾಯವಾಗಿಬಿಟ್ಟಿದ್ದರೆ ಈ ಯುಗವು ಕೃತಯುಗವಾಗಬೇಕಾಗಿದ್ದಿತು. ನಾವಿನ್ನೂ ಕಲಿಯುಗದಲ್ಲಿರುವೆವೆಂಬ ಅಂಶವನ್ನು ಮರೆತೆಯಾ ? ಅದಲ್ಲದೆ....

ಅರಿಂದಮನ ಮಾತು ಅರ್ಧದಲಿಯೇ ನಿಂತುಹೋಯಿತು. ಆ ಸಮಯದಲ್ಲಿ ಅವನ ಮನೆಯ ಬಾಗಿಲನ್ನು ಅದಾರೋ ದಡಧಡನೆ ಬಡಿದಂತೆ ಶಬ್ದವಾಯಿತು. ಅರಿಂದಮ ರಾಧಾನಾಥರಿಬ್ಬರೂ ಚಕಿತರಾಗಿ ಮಾತಿಲ್ಲದೆ ಕುಳಿತರು. ಅಷ್ಟರಲಿ ಯುವಕನೊಬ್ಬನು ಊರ್ಧ್ವಶ್ವಾಸ ಬಿಡುತ್ತ ಕಿರುಮನೆಯೊಳಗೆ ಪ್ರವೇಶಿಸಿದನು' ಒಡನೆಯೇ "ಅರಿಂದಮ ಬಾಬುಗಳೆ ! ನನ್ನನ್ನುಳಿಸುವುದು ತಮ್ಮ ಭಾರವಾಗಿದೆ. ತಮಗೆ ನಾನು ಶರಣಾಗತನಾಗಿದ್ದೇನೆ" ಎಂದು ಹೇಳುತ್ತ ಅರಿಂದಮನ ಪಾದಗಳ ಮೇಲೆ ಬಿದ್ದನು

ಯುವಕನಿಗೆ ಸುಮಾರು ೨೮ ವರ್ಷಗಳಿರಬಹುದು. ನೋಡಿದರೆ ಅಷ್ಟು ಶ್ರೀಮಂತನಂತೆ ತೋರುತ್ತಿರಲಿಲ್ಲ. ಅಷ್ಟು ಬಡವನಂತೆಯೂ ಬೋಧೆಯಾಗುತ್ತಿರಲಿಲ್ಲ. ಕೂದಲು ಕೆದರಿದ್ದರೂ ಸ್ವಲ್ಪವೂ ಗಮನಿಸದೆ, ಅರಿಂದಮನ ಮೇಲೆ ನಟ್ಟ ದೃಷ್ಟಿಯುಳ್ಳವನಾಗಿ, ಅವನ ಪಾದಗಳನ್ನು ಹಿಡಿದಿದ್ದುದನ್ನು ನೋಡಿದರೆ ಯುವಕನು ಬಹಳ ಭಯಗ್ರಸ್ತನಾಗಿದ್ದಂತೆ ತೋರಿಬರುತ್ತಿದ್ದಿತು. ಅರಿಂದಮನು ಪ್ರೀತಿಪುರಸ್ಸರವಾಗಿ ಯುವಕನನ್ನು ಕೈಹಿಡಿದೆಬ್ಬಿಸಿ, ಮಹಾಶಯ ! ತಾವಾರೆಂಬುದನ್ನು ಮೊದಲು ತಿಳಿಸುವುದಾಗಲಿ ತಮ್ಮನ್ನು ನೋಡಿದರೆ, ತಾವೊಬ್ಬ ವಕೀಲರೆಂದೂ, ಮದುವೆ ಇಲ್ಲದವರೆಂದೂ, ಉಬ್ಬಸರೋಗವುಳ್ಳವರೆಂದೂ ತಿಳಿಯುವುದಲ್ಲದೆ ತಮ್ಮ ವಿಚಾರದಲ್ಲಿ ಮತ್ತಾವುದನ್ನೂ ಅರಿಯಲಾಗಲಿಲ್ಲ" ಎಂದನು.

# ದ್ವಿತೀಯ ಪರಿಚ್ಛೇದ

---

ಯುವಕನು ತನ್ನ ವಿಚಾರವನ್ನು ಇಷ್ಟು ಬೇಗನೆ ಅರಿಂದಮನು ಅರಿತುಕೊಂಡುದನ್ನು ನೋಡಿ ಮೊದಲು ಅಚ್ಚರಿಗೊಂಡು ತನ್ನ ಬಟ್ಟೆಬರೆಗಳ ಸ್ಥಿತಿಯನ್ನೂ, ತನ್ನ ಕಿಸೆಯಲ್ಲಿನ ಕಾಗದಪತ್ರಗಳು ಹೊರಗೆ ಕಂಡುಬರುತ್ತಿದ್ದ ಬಗೆಯನ್ನೂ, ತಾನು ಬಿಡುತ್ತಿದ್ದ ಶ್ವಾಸದ ರೀತಿಯನ್ನೂ ಮನಸ್ಸಿಗೆ ತಂದುಕೊಂಡು, ತನ್ನ ವಿಚಾರವನ್ನು ಇಷ್ಟು ಬೇಗನೆ ತಿಳಿದುಕೊಂಡ ಅರಿಂದಮನನ್ನು ಮನಸಾ ಶ್ಲಾಘಿಸಿಕೊಂಡು, "ಮಹಾಶಯ! ನಾನು ಹೀಗೆ ತಟ್ಟನೆ ತಮ್ಮ ಬಳಿಗೆ ಬಂದುದಕ್ಕಾಗಿ ಕ್ಷಮಿಸಬೇಕು. ನನಗೆ ಹುಚ್ಚು ಹಿಡಿದಂತಾಗಿದೆ. ನಾನೇ ನಿರ್ಭಾಗ್ಯನಾದ ನಿಶಾಕಾಂತ" ಎಂದು ಹೇಳಿ ಸುಮ್ಮನಾದನು.

ಹೆಸರನ್ನು ಹೇಳಿದ ಮಾತ್ರದಿಂದ ಪರಿಚಯಲಾಭವಾಗಲಿಲ್ಲವೆಂದು ಮಿತ್ರರಿಬ್ಬರೂ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಬಳಿಕ ಅರಿಂದಮಬಾಬುವು "ತಮ್ಮ ಹೆಸರು ತಿಳಿದಂತಾಯಿತು. ಇನ್ನು ತಮ್ಮ ವೃತ್ತಾಂತವನ್ನು ಹೇಳೋಣಾಗಲಿ. ತಾವು ಇಷ್ಟು ಗಾಬರಿಯಾಗಿರಲು ಕಾರಣವೇನು? ಸಾವಧಾನದಿಂದ ಹೇಳೋಣಾಗಲಿ. ನಮ್ಮ ಕೈಯಲ್ಲಾದ ಸಹಾಯವನ್ನು ಮಾಡಲಾಗುವುದು" ಎಂದನು.

ನಿಶಾಕಾಂತ—ಇದೇನು, ಹೀಗೆ ಕೇಳುವಿರಲ್ಲಾ! ಹಾಗಾದರೆ ತಾವು ಈ ದಿನದ ಪತ್ರಿಕೆಯನ್ನು ನೋಡಿಲ್ಲವೇ? ನನ್ನನ್ನು ದಸ್ತಗಿರಿಮಾಡಬೇಕೆಂದಿರುವರು.

ಅರಿಂ—ಏನು? ತಮ್ಮನ್ನೇ ದಸ್ತಗಿರಿ ಮಾಡುವರೇ[ ಏತಕ್ಕಾಗಿ[ ಎಲ್ಲವನ್ನೂ ವಿಶದಪಡಿಸೋಣಾಗಲಿ.

ನಿಶಾ—ನಾನು ಆನಂದನ ಹತ್ಯಾಕಾರಿಯೆಂದು ನನ್ನನ್ನು ಹಿಡಿಯುವುದರಲ್ಲಿದ್ದಾರೆ!

ಅರಿಂ—ನೋಡಿದೆಯಾ ರಾಧಾನಾಥ! ನಾನು ಈಗ ತಾನೇ ಹೇಳಲಿಲ್ಲವೇ ಯುಗದ ಅಂತ್ಯವಾಗಿಲ್ಲವೆಂದು. ಅದಿರಲಿ ನಿಶಾಕಾಂತ ಬಾಬುಗಳೇ! ತಾವೇ ಹತ್ಯಾಕಾರಿಗಳೆಂದು ತಿಳಿದುದು ಹೇಗೆ[ ವಿವರಿಸೋಣಾಗಲಿ.

ನಿಶಾಕಾಂತನು ಮರುಮಾತಾಡದೆ, ಒಂದು ಪತ್ರಿಕೆಯನ್ನು ತೆಗೆದು ಅದರಲ್ಲಿ ಎರಡು ಮೂರು ಪುಟಗಳನ್ನು ತಿರುವಿಹಾಕಿ, ಒಂದು ಪುಟದ ಮೇಲ್ಭಾಗದಲ್ಲಿ ಬರೆದಿದ್ದ ದೊಡ್ಡ ದೊಡ್ಡ ಅಕ್ಷರಗಳನ್ನು ತೋರಿಸಿದನು. ಅದರಲ್ಲಿ ಈ ಪ್ರಕಾರವಾಗಿ ಬರೆದಿದ್ದಿತು:—

"ರೂಪನಗರದ ದೊಡ್ಡ ಬೀದಿಯಲ್ಲಿನ ವಿಸ್ಮಯಕರವಾದ ಸಂಘಟನೆ. ಆನಂದನೆಂಬ ಮುಖ್ಯಸ್ಥನ ಪರಾರಿ. ಅವನು ಕೊಲೆ ಮಾಡಲ್ಪಟ್ಟಿರುವನೆಂಬ ಸಂಶಯ. ಹತ್ಯಾಕಾರಿಯ ಗುರುತು".

ನಿಶಾಕಾಂತನು ಇದನ್ನೊಂದು ಬಾರಿ ಗಟ್ಟಿಯಾಗಿ ಓದಿದನು. ಬಳಿಕ ನಿಟ್ಟುಸಿರು ಬಿಡುತ್ತ, "ಪತ್ತೇದಾರ ಮಹಾಶಯ! ಹತ್ಯಾಕಾರಿಯ ಗುರುತುಗಳೆಲ್ಲವೂ ನನ್ನನ್ನೇ ತೋರಿಸುತ್ತಿವೆ. ಈ ವೇಳೆಗೆ ಪತ್ತೇದಾರ ಧೀರೇಂದ್ರಬಾಬುವು ನನ್ನನ್ನು ಹಿಂಬಾಲಿಸುತ್ತಿರಬಹುದು. ಅದೇನು ಶಬ್ದ! ಓಹೋ ಯಾರೋ ಇಲ್ಲಿ ಬಂದಂತಾಯಿತು. ಆದರೇನೂ ಹೇಳಲಾಗದು. ಈಗ ತಾವು ನನ್ನ ವಿಷಯವೆಲ್ಲವನ್ನೂ ಕೇಳಿ ನನ್ನನ್ನು ಉಳಿಸೋಣಾಗಬೇಕು. ನಾನೇನನ್ನೂ ಅರಿಯೆ. ನನ್ನ ಮೇಲೆ ವ್ಯಥಾ ದೋಷಾರೋಪಣೆ ಮಾಡಿದ್ದಾರೆ. ನಾನು ಹಾಗೆ ಹತ್ಯೆಗೆ ಪ್ರಯತ್ನಿಸುವಂತಹ ಅಧಮನಲ್ಲ. ನನ್ನನ್ನು ಕಾಪಾಡಬೇಕು. ಈ ವಿಷಯವು ತಿಳಿದೊಡನೆಯೇ ನನ್ನ ತಾಯಿಯ ಎದೆಯೊಡೆದುಹೋಗುವುದು. ತಾವು ದಯವಿಟ್ಟು ನನ್ನನ್ನು ರಕ್ಷಿಸೋಣಾಗಲಿ" ಎಂದನು.

ಅರಿಂ—ತಮಗೆ ಯಾವ ಯೋಚನೆಯೂ ಬೇಡ. ನಾನಿದನ್ನು ಆಮೂಲಾಗ್ರವಾಗಿ ಪರಿಶೋಧಿಸುವೆನು. ತಾವು ನಿಶ್ಚಿಂತರಾಗಿರಿ. ರಾಧಾನಾಥ' ಎಲ್ಲಿ ಆ ಪತ್ರಿಕೆಯಲ್ಲಿರುವುದನ್ನು ಆದ್ಯಂತವೂ ಓದು. ನಿಶಾಕಾಂತರು ಸ್ವಲ್ಪ ವಿಶ್ರಮಿಸಿಕೊಳ್ಳಲಿ.

ನಿಶಾಕಾಂತನು ಒಂದು ಕುರ್ಚಿಯನ್ನೆಳೆದುಕೊಂಡು ಸ್ವಲ್ಪ ಧೈರ್ಯದಿಂದ ಕುಳಿತುಕೊಂಡನು. ರಾಧಾನಾಥನು ಪತ್ರಿಕೆಯಲ್ಲಿದ್ದ ಕೊಲೆಯ ವಿವರವನ್ನು ಗಟ್ಟಿಯಾಗಿ ಓದಲಾರಂಭಿಸಿದನು.

"ರೂಪನಗರದಲ್ಲಿರುವ ದೊಡ್ಡ ಬೀದಿಯಲ್ಲಿನ ೨೨ ನೇ ನಂಬರು ಮನೆಯಲ್ಲಿ ಅತುಳೈಶ್ವರ್ಯ ಸಂಪನ್ನನಾದ ಅವಿವಾಹಿತನಾದ ಆನಂದನೆಂಬ ವೃದ್ಧನು ವಾಸಿಸುತ್ತಿದ್ದುದು ಸರ್ವರಿಗೂ ವಿದಿತವಾದ ವಿಷಯವಷ್ಟೆ. ಅವರಿಗೆ ಸುಮಾರು ೫೩ ವರ್ಷಗಳಿರಬಹುದು. ಅವನು ವ್ಯಾಪಾರದಲ್ಲಿ ಬಹಳ ಹಣವನ್ನು ಗಳಿಸಿ ಈಗ ಅದರಿಂದ ನಿವೃತ್ತನಾಗಿ ಹಣದಿಂದ ತನ್ನ ದಿವ್ಯ ಭವನವನ್ನು ಕಟ್ಟಿಸಿಕೊಂಡು ಆನಂದದಿಂದಿರುತ್ತಿದ್ದನು. ಅವನು ಸಾಮಾನ್ಯವಾಗಿ ಯಾರೊಡನೆಯೂ ಸೇರುತ್ತಿರಲಿಲ್ಲ. ಯಾರೊಡನೆಯೂ ಮಾತುಕಥೆಗಳನ್ನಾಡುತ್ತಿರಲಿಲ್ಲ. ಅವನ ನಡತೆಯೂ ವಿಸ್ಮಯಕರವೆಂದು ಆಗಾಗ ಜನಗಳುಹೇಳಿಕೊಳ್ಳುತ್ತಿದ್ದರು. ನೆನ್ನೆಯ ರಾತ್ರಿ ಅಥವಾ ಈ ದಿನ ಮುಂಜಾನೆಯ ಪೂರ್ವಭಾಗದಲ್ಲಿ ಬಹಳ ಆಶ್ಚರ್ಯಕರವಾದ ಸಂಘಟನೆಯುಂಟಾಗಿದೆ.

ತನ್ನ ವ್ಯಾಪಾರದ ಗುರುತಾಗಿ ಉಳಿಸಿಕೊಂಡಿದ್ದ ಮರದ ತುಂಡುಗಳನೇಕವು

ಆನಂದನ ಮನೆಯ ಹಿಂಭಾಗದಲ್ಲಿದ್ದುವು. ಅವುಗಳಿಗೆ ಬೆಂಕಿ ತಗುಲಿತೆಂದು ಮೊದಲು ವದಂತಿ ಹುಟ್ಟಿತು. ಒಡನೆಯೇ ಅದನ್ನು ಆರಿಸುವುದಕ್ಕಾಗಿ ಯಂತ್ರಗಳ ಸಹಾಯ ವನ್ನು ಹೊಂದಿದರು. ಆದರೂ ಬಹುಕಾಲದಿಂದ ಚೆನ್ನಾಗಿ ಒಣಗಿದ್ದ ಮರದ ತುಂಡುಗಳು ಹತ್ತಿಕೊಂಡು ಉರಿದುಹೋದುವು. ಉರಿಯನ್ನಾರಿಸಲು ಸ್ವಲ್ಪವೂ ಸಾಧ್ಯವಾಗಲಿಲ್ಲ.

ಇದುವರೆಗೆ ಇದೊಂದು ಆಕಸ್ಮಿಕ ಘಟನೆಯೆಂದು ತಿಳಿದಿದ್ದುದಾಯಿತು. ಆದು ಹೊಸದಾಗಿ ಬಂದಿರುವ ವಿಷಯಗಳಿಂದ ಕೊಲೆಯು ನಡೆದಿರುವಂತೆ ಭಾಸವಾಗು ತ್ತಿದೆ. ಮನೆಯ ಯಜಮಾನನಾದ ಆನಂದನು ಉರಿಯನ್ನು ಆರಿಸುವ ಪ್ರಯ ತ್ನವೇ ಮಾಡಿದಂತೆ ತೋರಲಿಲ್ಲ. ಏಕೆಂದರೆ ಆವನು ಅಲ್ಲಿರಲೇ ಇಲ್ಲ. ಅವನು ಮಲಗುವ ಕೊಠಡಿಯಲ್ಲಿ ನೋಡಿದುದರ ಮೇಲೆ ಅವನ ಹಾಸಿಗೆಯಲ್ಲಿ ರಾತ್ರಿ ಯಿಂದ ಯಾರೂ ಮಲಗಿದಂತೆ ತೋರಲಿಲ್ಲ. ಹಾಸಿದ್ದುದು ಹಾಗೆಯೇ ಇದ್ದಿತು ಮನೆಯಲ್ಲೆಲ್ಲಿಯೂ ಆನಂದನ ಸುಳಿವೇ ಇಲ್ಲ. ಅವನು ಪರಾರಿಯಾಗಿದ್ದಾನೆಂದು ಎಲ್ಲರೂ ಭಾವಿಸಿದರು. ಆದರೆ ಇನ್ನೂ ಪರೀಕ್ಷಿಸಿ ನೋಡಲು. ಅಲ್ಲಲ್ಲಿ ರಕ್ತ ಕಲೆ ಗಳು ಕಂಡುಬಂದವು. ಅವನ ಕಬ್ಬಿಣದ ಪೆಟ್ಟಿಗೆಯು ಒಡೆಯಲ್ಪಟ್ಟಿದ್ದಿತು. ಅದ ರಲ್ಲಿನ ಕೆಲವು ಕಾಗದ ಪತ್ರಗಳು ಹೊರಗೆ ಹಾಕಲ್ಪಟ್ಟಿದ್ದುವು. ಆ ಸ್ಥಳದಲ್ಲಿ ಹೊಡೆದಾಟ ನಡೆದಂತೆ ಕಂಡುಬರುತ್ತಿದ್ದಿತು. ಅಲ್ಲಿದ್ದ ಒಂದು ದೊಣ್ಣೆಯ ಹಿಡಿಯ ಮೇಲೆಲ್ಲಾ ರಕ್ತದ ಕಲೆಗಳಿದ್ದುವು. ಈ ದೊಣ್ಣೆಯು ವಿಲಾಸನಗರದ ವಕೀಲನಾದ ನಿಶಾಕಾಂತ ಬಾಬುವಿನದೆಂದೂ, ಈತನು ಹತ್ಯೆ ನಡೆದ ದಿನ ರಾತ್ರಿ ಬಹಳ ಹೊತ್ತಿನವರೆಗೂ ಆನಂದನ ಮನೆಯಲ್ಲಿ ಮಾತನಾಡುತ್ತಿದ್ದನೆಂದೂ ತಿಳಿಯಬಂದಿದೆ. ಪೋಲೀಸಿನವರಿಗೆ ಹತ್ಯೆ ನಡೆಸಿದವನು ಇಂತಹವನೇ ಎಂದು ತಿಳಿಯಲು ಇನ್ನೂ ಹೆಚ್ಚು ರುಜುವಾತುಗಳು ದೊರೆತಿವೆಯೆಂದೂ ತಿಳಿಯಬಂದಿದೆ. ಇನ್ನು ಮುಂದೆ ಅನೇಕ ಆಶ್ಚರ್ಯಕರಗಳಾದ ವಿಷಯಗಳು ತಿಳಿದುಬರಬಹುದೆಂದೂಹಿಸಲ್ಪಟ್ಟಿದೆ.

ಅರ್ಧ ಘಂಟೆಯ ನಂತರ—ನಾವು ಮುದ್ರಣಾಧಿಕಾರಿಗಳಿಗೆ ಈ ಪತ್ರಿಕೆಯನ್ನು ಕಳುಹಿಸುವಷ್ಟರಲ್ಲಿ ತಿಳಿಯಬಂದಂಶಗಳಲ್ಲಿ ಮುಖ್ಯವಾದುವುಗಳನ್ನು ನಮ್ಮ ವಾಚ ಕರ ಅವಗಾಹನೆಗಾಗಿ ಇಲ್ಲಿ ಬರೆದಿರುತ್ತೇವೆ. ಈಚೆಗೆ ತಿಳಿದುದರಲ್ಲಿ ನಿಶಾಕಾಂತ ನನ್ನು ದಸ್ತಗಿರಿ ಮಾಡಿರುವುದು ಹೆಚ್ಚು ಸಂಭವನೆಂದು ತೋರುತ್ತಿದೆ. ಅವನ ಹೆಸರಿನಲ್ಲಿ ವಾರಂಟು ಹೊರಟಿರುವುದೇನೋ ಖಂಡಿತವೇ ಸರಿ. ಹತ್ಯೆಯ ತರ ದೂದಿನಲ್ಲಿ ತಿಳಿದಿರುವ ಸಂಗತಿಯಲ್ಲಿ, ಆನಂದನ ಮಲಗುವ ಮನೆಯಲ್ಲಿರುವ ಕಿಟಿಕಿಗಳು ತೆರೆಯಲ್ಪಟ್ಟಿದ್ದುವೆಂದೂ, ಯಾವುದೋ ಭಾರವಾದ ಪದಾರ್ಥವೊಂದು ಮನೆಯಿಂದ ಮರದ ತುಂಡುಗಳಿದ್ದ ಕಡೆಗೆ ಎಳೆಯಲ್ಪಟ್ಟಿದ್ದಂತೆ ಗುರುತುಗಳಿದ್ದು ವೆಂದೂ, ಉರಿಯು ನಿಂತ ಬಳಿಕ ಹೋಗಿ ನೋಡುವಲ್ಲಿ ಬೂದಿಯ ರಾಶಿಯ

ಮಧ್ಯೆ ಯಾವುದೋ ಪದಾರ್ಥವನ್ನು ಸುಟ್ಟಂತೆ ಮಸೀಮಯವಾದ ಕೆಲವು ಪದಾರ್ಥಗಳು ಕಂಡುಬಂದುವೆಂದೂ ತಿಳಿದುಬಂದಿದೆ. ಪೋಲೀಸಿನವರ ನಂಬಿಕೆಯಲ್ಲಿ ಆನಂದನು ದೊಣ್ಣೆಯಿಂದ ತಲೆಯ ಮೇಲೆ ಪೆಟ್ಟು ತಿಂದವನಾಗಿ ಮೃತಿಹೊಂದಿರಬೇಕೆಂದೂ, ಬಳಿಕ ಹತ್ಯಾಕಾರಿಯು ಅವನ ಕಾಗದ ಪತ್ರಗಳನ್ನು ನೋಡಿ ಹಾರಿಸಿ ಅವನನ್ನು ಮರದ ತುಂಡುಗಳಿದ್ದೆಡೆಗೆ ಎಳೆದುಕೊಂಡು ಹೋಗಿ ಅವನನ್ನು ಸುಟ್ಟು ಬೂದಿಮಾಡಿರಬೇಕೆಂದೂ ತಿಳಿದುಬಂದಿದೆ. ಹೀಗೆ ಮಾಡಿದುದು ಕೊಲೆಯ ಗುರುತೇ ಸಿಗದಂತಾಗಲೆಂದಿರಬೇಕು. ಅಂತೂ ಈ ಕೊಲೆಯ ವಿಚಾರವನ್ನು ಪತ್ತೆ ಹಚ್ಚುವುದಕ್ಕೆ ನಮ್ಮ ಧೀರೇಂದ್ರ ಬಾಬುಗಳೇ ಸ್ವಂತವಾಗಿ ಮನಸ್ಸಿಗೆ ಹಚ್ಚಿಕೊಂಡಿರುವರು. ಇವರು ಸುಪ್ರಸಿದ್ಧ ಪತ್ತೇದಾರರೆಂಬುದನ್ನು ನಾವು ಪುನಃ ಇಲ್ಲಿ ವಿವರಿಸಬೇಕಾಗಿಲ್ಲ. ಇವರ ಅತುಳ ಬುದ್ಧಿಶಕ್ತಿ, ಕಾರ್ಯದಕ್ಷತೆ ಇವುಗಳಿಂದ ಎಂದಿನಂತೆ ಇವರು ಈ ಮೊಕದ್ದಮೆಯಲ್ಲಿಯೂ ಜಯಶೀಲರಾಗಿ ಕೀರ್ತಿಯನ್ನು ಸ್ಥಾಪಿಸಲೆಂದು ಆಶಿಸುತ್ತೇವೆ."

ಇಷ್ಟು ಓದಿ ರಾಧಾನಾಥನು "ನೋಡಿದೆಯೇನಯ್ಯಾ ಅರಿಂದಮ! ನೀನು ಕಷ್ಟಪಟ್ಟು ಕಂಡುಹಿಡಿದು ಪತ್ತೆ ನಡೆಸುವುದೊಂದೇ! ನೋಡು! ಧೀರೇಂದ್ರ ಬಾಬುವಿಗೇ ಕೀರ್ತಿ ಪತಾಕೆಯೆಲ್ಲವೂ! ಪ್ರಸಿದ್ಧ ಪತ್ತೇದಾರನೆಂದು ಧೀರೇಂದ್ರನಿಗೆ ಹೇಳುವರೇ ಹೊರತು ನಿನ್ನ ವಿಷಯವೂ ನೀನವನಿಗೆ ಮಾಡಿರುವ ಸಹಾಯವೂ ಒಂದೂ ಹೊರಪಡುವುದೇ ಇಲ್ಲ!" ಎಂದನು.

ಅರಿಂದಮ—ಅದಕ್ಕೇಕೆ ಚಿಂತೆ! "ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ" ಎಂಬ ವಾಕ್ಯವಿಲ್ಲವೇ? ನನ್ನ ಕೆಲಸವನ್ನು ನಾನು ಮಾಡುವೆನು ಅದೂ ಆತ್ಮತೃಪ್ತಿಗಾಗಿ ಮಾಡುವೆನು. ಫಲಾಪೇಕ್ಷೆಯಿಂದಾಗಲೀ ಕೀರ್ತಿಯನ್ನಿಚ್ಛಿಸಿಯಾಗಲಿ ಮಾಡಿಲ್ಲ. ಅಲ್ಲದೆ ಬೇಕೆಂದೇ ನನ್ನ ಹೆಸರನ್ನು ಯಾವುದರಲ್ಲಿಯೂ ಪ್ರಕಟಿಸಲು ಅನುಮತಿಯನ್ನೀಯಲಿಲ್ಲ. ಈಗ ಆ ವಿಷಯವೇಕೆ? ನಮ್ಮ ನಿಶಾಕಾಂತರನ್ನು ಸ್ವಲ್ಪ ಸಮಾಧಾನಗೊಳಿಸೋಣ. ನಿಶಾಕಾಂತ ಬಾಬುಗಳೇ! ಇದನ್ನು ಓದಿದ ಬಳಿಕ ತಾವು ತಪ್ಪಿತಸ್ಥರೆಂದು ಸಿದ್ಧಾಂತವಾದಂತಿದೆ. ತಾವಿನ್ನೂ ದಸ್ತಗಿರಿ ಹೊಂದದಿರುವುದು ಆಶ್ಚರ್ಯವೇ ಸರಿ."

ನಿಶಾ – ಹಾಗಾದರೆ ತಾವೂ ನನ್ನ ಕೈ ಬಿಡೋಣಾಯಿತೇ?

ಅರಿಂ – ಚಿಃ! ಹಾಗಲ್ಲ! ವಿನೋದಕ್ಕೆ ಹಾಗೆ ಹೇಳಿದೆನಷ್ಟೆ. ತಾವು ಹೇಳಬೇಕಾದುದನ್ನು ಮುಗಿಸೋಣಾಗಲಿ.

ನಿಶಾ – ಅರಿಂದಮ ಬಾಬುಗಳೆ! ನನ್ನನ್ನು ಹಿಡಿಯಲು ಈಗಲೇ ಯಾರಾದರೂ ಬಂದರೆ ನನ್ನ ಕಥೆಯನ್ನು ಪೂರ್ತಿಯಾಗಿ ಕೇಳಿ ಕಳುಹಿ ಕೊಡೋಣಾಗಲಿ. ನನಗೆ ತಿಳಿದಿರುವುದೆಲ್ಲವನ್ನೂ ಹೇಳಿ ಬಿಡುತ್ತೇನೆ. ನಾನು ಈ ವಿಲಾಸ ನಗರಿಯ

ಲ್ಲಿನ ಒಬ್ಬ ವಕೀಲ. ನನ್ನ ತಂದೆ ತಾಯಿಗಳು ಇಲ್ಲಿಗೆ ಎರಡು ಮೈಲಿಗಳ ದೂರ ದಲ್ಲಿರುವ ಹರಪುರ ಗ್ರಾಮದಲ್ಲಿ ವಾಸಮಾಡುತ್ತಾರೆ. ನಾನು ನನ್ನ ಕೆಲಸಗಳನ್ನು ನೋಡಿಕೊಂಡು ಪ್ರತಿದಿನವೂ ನನ್ನ ಮಾತಾಪಿತೃಗಳಲ್ಲಿಗೆ ಹೋಗುತ್ತಿರುವ ಪದ್ಧತಿ. ಆದರೆ ನೆನ್ನೆಯ ದಿನ ರಾತ್ರಿ ಆನಂದನೊಡನೆ ಹೆಚ್ಚು ಕೆಲಸವಿದ್ದುದರಿಂದ ರೂಪ ನಗರದಲ್ಲಿಯೇ ಒಂದು ಭೋಜನಶಾಲೆಯಲ್ಲಿಯೇ ಉಳಿದುಕೊಂಡೆನು. ಈ ದಿನ ಪ್ರಾತಃಕಾಲ ಏಳುತ್ತಲೇ ಹೀಗೆಯೇ ನನ್ನ ಆಫೀಸಿಗೆ ಹೋಗಬೇಕೆಂದು ಬರುತ್ತಿದ್ದೆನು. ರಾತ್ರಿ ಎಂದಿನಂತೆ ನಾನು ಹರಪುರ ಗ್ರಾಮಕ್ಕೆ ತಂದೆತಾಯಿಗಳನ್ನು ನೋಡಲು ಹೋಗಲಿಲ್ಲ. ದಾರಿಯಲ್ಲಿ ಬರುತ್ತಿದ್ದಾಗ ಈ ಪತ್ರಿಕೆಯಲ್ಲಿ ಈ ವಿಷಯವನ್ನು ಓದಿದೆನು. ಅದುವರೆಗೆ ನನಗೆ ಈ ಹತ್ಯೆಯ ವಿಷಯವೇ ತಿಳಿಯದು. ಇದನ್ನು ಓದುತ್ತಲೇ ನನಗುಂಟಾದ ಪರಿಸ್ಥಿತಿಯು ತಮಗೇ ವೇದ್ಯವಿರಬಹುದು. ಬಹು ಗಾಬರಿಯಿಂದ ಯಾವ ಪೋಲೀಸಿನವನನ್ನು ದೂರದಲ್ಲಿ ನೋಡಿದರೂ ನಡುಗುತ್ತ ನಿಮ್ಮಲ್ಲಿಗೆ ಓಡಿಬಂದೆನು. ನಾನು ಹರಪುರಕ್ಕೆ ಹೋಗಿದ್ದರೂ, ನನ್ನ ಆಫೀಸಿಗೆ ಹೋಗಿದ್ದರೂ ಹಿಡಿದುಹಾಕಿಬಿಡುತ್ತಿದ್ದರು. ಎಲ್ಲವನ್ನೂ ತಮಗೆ ತಿಳಿಸಿದರೆ ಈ ಮೊಕದ್ದಮೆಯನ್ನು ತಾವು ಪರಿಶೀಲಿಸಿ ನನ್ನನ್ನುದ್ಧಾರಮಾಡುವಿರೆಂದು ನಂಬಿ ಇಲ್ಲಿಗೆ ಹೀಗೆ ಓಡಿಬಂದೆನು. ಹೀಗೆ ಬರುತ್ತಿರುವಾಗ ಬಹಳ ದೂರದಲ್ಲಿ ಯಾರೋ ನನ್ನ ಹಿಂದೆಯೇ ಬರುತ್ತಿದ್ದಂತೆ ನನಗೆ ಬೋಧೆಯಾಗುತ್ತಿತ್ತು. ಈ ವೇಳೆಗೆ ಅವನು ಪೋಗಿರುವನೋ ...ಅಥವಾ....ಅದೇನು ಶಬ್ದ ? ಓಹೋ ! ಯಾರೋ ನನ್ನನ್ನು ಹಿಡಿಯಲು ಬಂದಿರುವಂತಿದೆ.

ಈ ಸಮಯದಲ್ಲಿ ಹೊರಗೆ ಅದಾರೋ ಬರುವಂತೆ ಶಬ್ದವಾಯಿತು. ಸ್ವಲ್ಪ ಹೊತ್ತಿನಲ್ಲಿಯೇ ಮಧ್ಯಮ ವಯಸ್ಕನಾಗಿದ್ದ ತರುಣನೊಬ್ಬನು ಪೋಲೀಸಿನವರ ಉಡುಪನ್ನುಟ್ಟುಕೊಂಡಿದ್ದವನು ಒಳಕ್ಕೆ ಪ್ರವೇಶಿಸಿದನು. ಅವನ ಹಿಂದೆ ಇಬ್ಬರು ಪೋಲೀಸು ಜವಾನರು ಬಂದರು. ತರುಣನು ' ನಿಶಾಕಾಂತ ಬಾಬುಗಳೆ! ' ಎಂದನು ನಿಶಾಕಾಂತನು ನಡುಗಿದವನಾಗಿ, ತಾವಾರೆಂದನು.

ತರುಣ—ನನ್ನನ್ನು ಧೀರೇಂದ್ರನೆನ್ನುವರು. ಆನಂದನ ಹತ್ಯಾಕಾರಿಯೆಂದು ತಮ್ಮನ್ನು ದಸ್ತಗಿರಿಮಾಡಲು ಬಂದಿದ್ದೇನೆ.

## ತೃತೀಯ ಪರಿಚ್ಛೇದ

---

ಧೀರೇಂದ್ರ ಬಾಬುವು ಸುಮಾರು ಮೂವತ್ತೈದು ವರ್ಷಗಳವನಿರಬಹುದು. ಅಷ್ಟು ಎತ್ತರವಾದ ಆಳಲ್ಲ. ಮೈದುಳು ಸ್ವಲ್ಪ ಸಂಕುಚಿತ. ಮುಖದಲ್ಲಿ ದರ್ಪವು ಹೆಚ್ಚು

ಕಾರ್ಯತಃ ಶಕ್ತಿಯು ಕಡಿಮೆ. ಆದರೆ ಅದೃಷ್ಟವಶಾತ್ ಪೋಲೀಸುಠಾಣೆಯಲ್ಲಿ ಪ್ರಚಂಡ ಪ್ರಖ್ಯಾತಿಯನ್ನು ಪಡೆದಿದ್ದನು. ಅದು ಹೇಗೆಂಬುದನ್ನು ವಾಚಕರು ಈಗಾಗಲೇ ಸ್ವಲ್ಪ ಬಲ್ಲವರಾಗಿರುವರು.

ಧೀರೇಂದ್ರನು ದರ್ಪದಿಂದ "ತಾವೇ ನಿಶಾಕಾಂತರೆಂದು ತಿಳಿಯಲು ಕಷ್ಟವಾಗಲಿಲ್ಲ. ತಮ್ಮನ್ನು ದೂರದಿಂದಲೇ ಹಿಂಬಾಲಿಸಿ ಬಂದಿದ್ದೇನೆ. ಈಗ ತಾವೆನ್ನ ಬಂದಿಗಳು" ಎಂದನು.

ನಿಶಾಕಾಂತನು ಮೌನವದನನಾಗಿ ಅರಿಂದಮನ ಕಡೆಗೆ ನೋಡಿ ನಿರಾಶಾಪರವಶನಾದಂತೆ ದೀರ್ಘವಾಗಿ ನಿಟ್ಟುಸುರಿಟ್ಟನು. ಅರಿಂದಮನು ಅವನನ್ನೊಂದು ಬಾರಿ ನೋಡಿದನು. 'ಆ ದೃಷ್ಟಿಯಲ್ಲಿ ನಿನಗೇನೂ ಭಯವಿಲ್ಲೆಂದು ಹೇಳಿದ ಹಾಗೆ ತೋರಿತು. ನಿಶಾಕಾಂತನು ಸ್ವಲ್ಪ ಸ್ಥಿರನಾದನು. ಅರಿಂದಮನು ಧೀರೇಂದ್ರನ ಕಡೆಗೆ ತಿರುಗಿ, "ಬಾಬುಗಳೆ! ತಾವು ಹೇಗೂ ಇವರನ್ನು ದಸ್ತಗಿರಿ ಮಾಡಿರುವಿ ಒಂದು ಅರ್ಧಗಂಟೆಯಲ್ಲಿ ಹೆಚ್ಚು ಪ್ರಮಾದವಾಗುವುದಾದರೂ ಏನು? ಇವರು ತಮ್ಮ ವಿಷಯವೆಲ್ಲವನ್ನೂ ಹೇಳುವಷ್ಟರಲ್ಲಿ ತಾವು ಬರೋಣಾಯಿತು. ಅವೆಲ್ಲವನ್ನೂ ಕೇಳಿದರೆ ಈ ಮೊಕದ್ದಮೆಯನ್ನು ಹೆಚ್ಚು ಸುಲಭವಾಗಿ ಪತ್ತೆ ಹಚ್ಚಲಾಗವೆ?" ಎಂದನು.

ಧೀರೇಂದ್ರ—ಈ ಮೊಕದ್ದಮೆಯಲ್ಲಿ ಪತ್ತೆಯಾಗಬೇಕಾದುದೇನೂ ಉಳಿದಂತೆ ತೋರಲಿಲ್ಲ. ಇದರ ರಹಸ್ಯವನ್ನು ಈಗಾಗಲೇ ಭೇದಿಸಿಬಿಟ್ಟಿರುವೆನು.

ಅರಿಂ—ಅದೇನೋ ನಿಜ. ಆದರೂ ಇವರ ಹೇಳಿಕೆಯನ್ನು ಕೇಳುವುದರಿಂದ ನಷ್ಟವೇನು ?

ಧೀರೇಂ—ವೃಥಾ ಕಾಲಹರಣವಾಗುವುದಿಲ್ಲವೇ ?

ಅರಿಂ—ಆದರೂ ತಾವು ದಯವಿಟ್ಟು ಅಪ್ಪಣೆಯನ್ನಿತ್ತರೆ, ಕೇಳಬೇಕೆಂದಿರುವೆನು.

ಧೀರೇಂ—ಒಳ್ಳೆಯದು. ತಮಗೋಸ್ಕರ ಇಲ್ಲವೆಂದು ಹೇಳಲಾರೆನು. ಆದರೆ ನನ್ನ ಬಂದಿಯ ಬಳಿ ನಾನಿರುವುದು ಆವಶ್ಯಕ. ಅಲ್ಲದೆ, ಅವನು ಹೇಳುವುದೆಲ್ಲವೂ ಅವನ ತಪ್ಪಿತದ ರುಜುವಾತಾಗಲು ಸಹಾಯವಾಗುವುದೆಂದು ಅವನನ್ನು ಎಚ್ಚರಿಸುವುದು ನನ್ನ ಕರ್ತವ್ಯ.

ನಿಶಾ—ಅಷ್ಟರಮಟ್ಟಿಗೆ ಅನುಕೂಲ ಮಾಡಿಕೊಡೋಣಾಗಲಿ. ಸತ್ಯವನ್ನು ತಾವು ಕೇಳಿ ತಿಳಿದುಕೊಂಡರೆ ನನ್ನ ಮೇಲೆ ಕೃಪೆ ಮಾಡಿದಂತಾಗುವುದು.

ಧೀರೇಂದ್ರನು ತನ್ನ ಕಿಸೆಯಿಂದ ಒಂದು ಗಡಿಯಾರವನ್ನು ತೆಗೆದು, 'ಇನ್ನು ಅರ್ಧ ಗಂಟೆ ಮಾತ್ರ ಅವಕಾಶ. ಬೇಗ ಎಲ್ಲನ್ನೂ ಹೇಳಿರಿ" ಎಂದನು.

ನೀಲಕಾಂತನು ಹೇಳತೊಡಗಿದನು:—"ಮಹಾಶಯ! ಮೊದಲು ನಾನು ಹೇಳಬೇಕಾದುದೇನೆಂದರೆ, ಆನಂದನಾರೆಂಬುದನ್ನು ನೆನ್ನೆಯವರೆಗೂ ನಾನರಿತೇ ಇರಲಿಲ್ಲ. ಅವನ ಹೆಸರನ್ನು ಮಾತ್ರ ಕೇಳಿದ್ದೆನು. ಚಿಕ್ಕಂದಿನಲ್ಲಿ ನಮ್ಮ ತಂದೆ ತಾಯಿಗಳೂ ಅವನೂ ಅಕ್ಕಪಕ್ಕ ಮನೆಗಳಲ್ಲಿ ವಾಸಮಾಡುತ್ತಿದ್ದು ಬಳಿಕ ಬೇರೆ ಬೇರೆ ಕಡೆಗೆ ಹೊರಟು ಹೋದರಂತೆ. ನೆನ್ನೆಯ ದಿನ ಮಧ್ಯಾಹ್ನ ಸುಮಾರು ಮೂರು ಘಂಟೆಯ ಸಮಯದಲ್ಲಿ ಅವನು ನನ್ನ ಆಫೀಸಿಗೆ ಬಂದಾಗ ನನಗೆ ಎಷ್ಟು ಆಶ್ಚರ್ಯವಾಗಿರಬಹುದೆಂಬುದನ್ನು ತಾವೇ ಊಹಿಸಬೇಕು. ಆದರೆ ನಾನು ಬಂದ ವಿಚಾರವನ್ನವನು ಹೇಳುತ್ತಲೇ ನನ್ನ ವಿಸ್ಮಯವು ದ್ವಿಗುಣಿತವಾಯಿತು. ಅವನು ಒಂದು ಚಿಕ್ಕ ಹಳೆಯ ಪುಸ್ತಕವನ್ನು ತೆಗೆದು ತೋರಿಸಿದನು. ಅದರಲ್ಲಿ ಅಸ್ಪಷ್ಟವಾಗಿ ಅದೇನೋ ಬರೆದಿದ್ದಿತು. ಅದನ್ನು ಇಲ್ಲಿಟ್ಟುಕೊಂಡಿದ್ದೇನೆ— ಅದನ್ನು ನನ್ನ ಮೇಜಿನ ಮೇಲಿಟ್ಟನು.

"'ಇದೋ! ಇದು ನನ್ನ ಉಯಿಲು!' ಎಂದು ಹೇಳಿ ಅದನ್ನು ಸರಿಯಾಗಿ ನಕಲುಮಾಡಿಕೊಡುವುದಕ್ಕೂ ಸರಿಯಾಗಿದೆಯೇ ಇಲ್ಲವೇ ಎಂಬುದನ್ನು ನೋಡುವುದಕ್ಕೂ ನನ್ನ ಕೈಯಲ್ಲಿಟ್ಟನು. ನಾನು ಅದನ್ನು ಬೇರೊಂದು ಕಾಗದಪತ್ರದಲ್ಲಿ ಬರೆಯತೊಡಗುತ್ತಲೇ ನನ್ನ ಆಶ್ಚರ್ಯಕ್ಕೆ ಪಾರವೇ ಇಲ್ಲದಂತಾಯಿತು. ಅವನಿಗಿದ್ದ ಚರಾಚರ ಆಸ್ತಿಯೆಲ್ಲವನ್ನು ನನಗೆ ಬರೆದು ಬಿಟ್ಟಿದ್ದನು. ನಾನು ಚಕಿತನಾಗಿ ಅವನ ಮುಖವನ್ನು ನೋಡಲು ನನ್ನನ್ನು ಸ್ವಲ್ಪ ಹಾಸ್ಯವದನದಿಂದ ನೋಡಿ, ತಾನೊಬ್ಬ ಆಜನ್ಮ ಬ್ರಹ್ಮಚಾರಿಯೆಂದೂ, ತನಗೆ ವಾರಸುದಾರರಾರೂ ಇಲ್ಲವೆಂದೂ, ನನ್ನ ತಂದೆ ತಾಯಿಗಳು ಅವನಿಗೆ ಚಿಕ್ಕಂದಿನಿಂದಲೂ ತಿಳಿದವರೆಂದೂ, ನಾನು ಮುಂದಕ್ಕೆ ಬರುವ ಯೋಗ್ಯ ಹುಡುಗನೆಂದೂ, ತನ್ನ ಕಷ್ಟಾರ್ಜಿತವಾದ ಸಂಪತ್ತು ದುರುಪಯೋಗವಾದಂತಾಗಲಿಲ್ಲವೆಂದೂ ಹೇಳಿ ನಾನು ನಂಬುವಂತೆಮಾಡಿದನು. ನಾನು ಅವನಿಗೆ ಬಹಳ ಕೃತಜ್ಞನಾಗಿರುವುದಾಗಿ ಹೇಳಿದೆನು. ಉಯಿಲನ್ನು ಬರೆದುದಾಯಿತು. ನನ್ನ ಗುಮಾಸ್ತನು ಸಾಕ್ಷಿಯಾದನು. ನಾನೂ ರುಜುಮಾಡಿದೆನು. ಈ ನೀಲಿಯ ಕಾಗದದಲ್ಲಿರುವುದೇ ಸರಿಯಾದ ಉಯಿಲು—ಅವನು ಬರೆದುಕೊಂಡು ಬಂದಿದ್ದುದು ಈ ಹಳೆಯ ಪುಸ್ತಕದಲ್ಲಿದೆ.

"ಬಳಿಕ, ಆನಂದನು ಇನ್ನೂ ಅನೇಕ ಕಾಗದಪತ್ರಗಳು ಮನೆಯಲ್ಲಿರುವುದಾಗಿಯೂ, ಎಲ್ಲವೂ ಸರಿಯಾಗಿ ವ್ಯವಸ್ಥೆಯಾಗುವ ವರೆಗೂ ತನ್ನ ಮನಸ್ಸಿಗೆ ಸಮಾಧಾನವಿಲ್ಲವಾಗಿಯೂ ಹೇಳಿ ಅದೇರಾತ್ರಿ ತನ್ನ ಮನೆಗೆ ಬಂದರೆ ಎಲ್ಲವನ್ನೂ ನೋಡಿ ಇತ್ಯರ್ಥಮಾಡಿ ಬರುವುದಾಗಿಯೂ ಹೇಳಿದನು. ನಮ್ಮ ತಂದೆತಾಯಿಗಳಿಗಾಗಲಿ ಯಾರಿಗೇ ಆಗಲಿ ಈ ವಿಷಯವನ್ನು ಹೇಳಬಾರದೆಂದು ಎಚ್ಚರಿಸಿದನು. ಎಲ್ಲವೂ ಇತ್ಯರ್ಥವಾದ ಮೇಲೆ ತಟ್ಟನೆ ನನ್ನ ತಂದೆತಾಯಿಗಳಿಗೆ ತಿಳಿದುಬಂದಾಗ ಅವರಿಗೆ ಅಧಿಕವಾಗಿ

ಆಶ್ಚರ್ಯವೂ ಸಂತೋಷವೂ ಏಕಕಾಲದಲ್ಲಿ ಆಗುವುದೆಂದು ಹೇಳಿದನು. ಅವನು ಬಹಳವಾಗಿ ಹೇಳಿದ ಮೇಲೆ ಈ ನಿಬಂಧನೆಗಳಿಗೆ ಒಪ್ಪಿಕೊಂಡೆನು.

"ಆದರಂತೆಯೇ ಹರಪುರ ಗ್ರಾಮಕ್ಕೆ ನಾನು ಬಾರೆನೆಂದು ತಂತಿಯನ್ನು ಕೊಟ್ಟೆನು. ಸುಮಾರು ಒಂಭತ್ತು ಗಂಟೆಯ ವೇಳೆಗೆ ಆನಂದನ ಮನೆಗೆ ಹೋದೆನು. ಅವನ ಕೊಠಡಿಯಲ್ಲಿ –"

ಅರಿಂ—ತಮಗೆ ಬಾಗಿಲನ್ನು ತೆರೆದವರಾರು ?

ನಿಶಾ—ಒಬ್ಬ ವೃದ್ಧೆ.

ಅರಿಂ—ಆಕೆಯೇ ತಮ್ಮನ್ನು ಕರೆದುಕೊಂಡು ಹೋದಳೋ ?

ನಿಶಾ —ಅಹುದು.

ಅರಿಂ—ಸರಿ, ಮುಂದೆ ಹೇಳೋಣಾಗಲಿ.

ನಿಶಾಕಾಂತನು, ಹಣೆಯಲ್ಲಿ ಧಾರೆಧಾರೆಯಾಗಿ ಹರಿಯುತ್ತಿದ್ದ ಬೆವರನ್ನು ಒರೆಸಿಕೊಳ್ಳುತ್ತ ಹೇಳತೊಡಗಿದನು:— "ವೃದ್ಧೆಯು ಕರೆದುಕೊಂಡು ಹೋಗಿ ಆನಂದನ ಕೊಠಡಿಯಲ್ಲಿ ಬಿಟ್ಟುಹೋದಳು. ಅವನು ತಾನು ಮಲಗುವ ಮನೆಗೆ ಕರೆದುಕೊಂಡು ಹೋಗಿ ಅಲ್ಲಿದ್ದ ಕಬ್ಬಿಣದ ಪೆಟ್ಟಿಗೆಯೊಂದರಲ್ಲಿದ್ದ ಕಾಗದಪತ್ರಗಳೆಲ್ಲವನ್ನೂ ನನಗೆ ತೋರಿಸಿದನು. ಸುಮಾರು ರಾತ್ರಿ ಹನ್ನೆರಡು ಗಂಟೆಗಳ ವೇಳೆಗೆ ಪತ್ರಗಳ ಪಠನವು ಪರ್ಯವಸಾನವಾಯಿತು. ಬಳಿಕ ಬೀದಿಯ ಬಾಗಿಲ ಬಳಿ ವೃದ್ಧೆಯು ಮಲಗಿರುವುದರಿಂದ ಅಲ್ಲಿ ಹೋದರೆ ಅವಳನ್ನು ಎಬ್ಬಿಸಬೇಕಾಗುವುದೆಂದು ಹೇಳಿ ಇದುವರೆಗೆ ತೆರೆದುಹಾಕಲ್ಪಟ್ಟಿದ್ದ ದೊಡ್ಡ ಕಿಟಕಿಯ ಮೂಲಕ ನನ್ನನ್ನು ಹೊರಕ್ಕೆ ಕಳುಹಿಸಿದನು."

ಅರಿಂ—ಕಿಟಕಿ ತೆರೆ ಹಾಕಲ್ಪಟ್ಟಿದ್ದಿತೇ ?

ನಿಶಾ—ಚೆನ್ನಾಗಿ ನೆನಪಿಲ್ಲ. ಅರ್ಧ ಮಾತ್ರ ತೆರೆಯಿಂದ ಆಚ್ಛಾದಿತವಾಗಿತ್ತೆಂದು ತೋರುವುದು. ಅಹುದು, ಈಗಲೀಗ ಸ್ಮೃತಿಗೆ ಬರುತ್ತಿದೆ. ತೆರೆಯಿಂದ ಮುಚ್ಚಲ್ಪಟ್ಟಿದ್ದ ಕಿಟಕಿಯ ಬಳಿ ಹೋಗಿ ತೆರೆಯನ್ನು ಮೇಲಕ್ಕೆಳೆದು ನನ್ನನ್ನು ಕಳುಹಿಸಿದುದು ಜ್ಞಾಪಕವಾಯಿತು— ನಾನು ತಂದಿದ್ದ ನನ್ನ ದೊಣ್ಣೆಯು ಅವನ ಮನೆಯಲ್ಲಿಯೇ ಉಳಿದುಹೋಯಿತು. ನಾನದನ್ನು ಕೇಳಿದಾಗ 'ಭಯವೇನು ಮಗು ! ನೀನು ಪುನಃ ಬಂದು ಕೇಳುವವರೆಗೆ ಇಲ್ಲಿಯೇ ಉಳಿದಿರಲಿ' ಎಂದನು. ನಾನು ಹೊರಟುಬಂದಾಗ ಕಾಗದ ಪತ್ರಗಳೆಲ್ಲವೂ ಮೇಜಿನ ಮೇಲೆಯೇ ಇದ್ದುವು. ಕಬ್ಬಿಣದ ಪೆಟ್ಟಿಗೆಯು ಹಾಗೆಯೇ ತೆರೆದುಹಾಕಲ್ಪಟ್ಟಿದ್ದಿತು. ಆ ರಾತ್ರಿ ನಾನು ಹರಪುರ ಗ್ರಾಮಕ್ಕೆ ಹೋಗಲಿಲ್ಲ. ಸಮೀಪದಲ್ಲಿಯೇ ಒಂದು ಹೋಟಲಿನಲ್ಲಿ ಉಳಿ

ದುಕೊಂಡೆನು. ಈ ವಿಷಯವನ್ನು ಪ್ರಾತಃಕಾಲದ ಪತ್ರಿಕೆಯಲ್ಲಿಓದಿದೆನು. ಅದು ವರೆಗೆ ಈ ಭೀಷಣಕೃತ್ಯದ ವಿಚಾರವನ್ನೇ ನಾನರಿಯೆ. ಇಷ್ಟೇ ನನಗೆ ತಿಳಿದಿರುವ ವಿಚಾರ.

ಧೀರೇಂದ್ರ—ಅರಿಂದಮ ಬಾಬುಗಳೆ ! ಮತ್ತೇನಾದರೂ ಕೇಳಬೇಕಾದುದು ಉಂಟೆ ?

ಅರಿಂ— ಹರಪುರ ಗ್ರಾಮಕ್ಕೆ ಹೋಗಿಬರುವವರೆಗೂ ಮತ್ತೇನೂ ಕೇಳಬೇಕಾ ದುದಿಲ್ಲ.

ಧೀರೇಂ—ರೂಪನಗರಕ್ಕೆಂದು ಹೇಳಿ. ಅದೇ ಅಲ್ಲವೆ ತಮ್ಮ ಮನಸ್ಸಿನಲ್ಲಿ ಪ್ಪುದು ?

ಅರಿಂ—ನಿಜ, ನಿಜ. ಅದೇ ಹೇಳುವುದಕ್ಕೆ ಹೋಗಿ ಹರಪುರಗ್ರಾಮವೆಂದು ತಪ್ಪಿ ಹೇಳಿದೆನೆಂದು ತೋರುವುದು.

ಧೀರೇಂದ್ರಬಾಬುವು ಅರಿಂದಮನ ಉತ್ತರವನ್ನು ಕೇಳಿ ಚಕಿತನಾಗಿ ಅವನ ಮುಖವನ್ನೊಂದು ಬಾರಿಯೂ ರಾಧಾನಾಥನ ಮುಖವನ್ನೊಂದು ಬಾರಿಯೂ ನೋಡಿ ಹಾಸ್ಯವದನನಾಗಿ, "ಅರಿಂದಮ ಮಹಾಶಯ ! ತಮ್ಮೊಡನೆ ಒಂದೆರಡು ಮಾತ ನಾಡಬೇಕಾಗಿದೆ" ಎಂದನು. ಅರಿಂದಮನು ಅವಶ್ಯಕವಾಗಾಗಬಹುದೆಂದನು. ಧೀರೇಂದ್ರನು ನಿಶಾಕಾಂತನ ಕಡೆ ತಿರುಗಿ, "ಬಾಬು ! ತಾವು ನನ್ನ ಪೋಲೀಸ ರೊಡನೆ ಠಾಣೆಗೆ ಹೋಗೋಣಾಗಲಿ. ಹೊರಗಡೆ ಒಂದು ಬಂಡಿಯು ತಮಗಾಗಿ ಸಿದ್ಧವಾಗಿದೆ" ಎಂದನು.

ನಿಶಾಕಾಂತನು ನಿಧಾನವಾಗೆದ್ದು ಅರಿಂದಮನ ಕಡೆಗೆ ಸಾಸ್ರುನಯನನಾಗಿ ನೋಡುತ್ತಾ ಹೊರಟುಹೋದನು. ಧೀರೇಂದ್ರನು ಅಲ್ಲಿಯೇ ನಿಂತನು. ಅರಿಂದ ಮನು ಉಯಿಲನ್ನು ಮೊದಲು ಬರೆದಿದ ಚಿಕ್ಕ ಪುಸ್ತಕವನ್ನು ತೆಗೆದುಕೊಂಡು ಪರೀಕ್ಷೆ ಮಾಡುತ್ತಿದ್ದನು.

---

## ಚತುರ್ಥ ಪರಿಚ್ಛೇದ

---

ಅರಿಂದಮ— ಈ ಉಯಿಲನ್ನು ನೋಡಿದರೆ ಏನಾದರೂ ವಿಶೇಷ ವಿಷಯವು ತಮಗೆ ತಿಳಿಯುವುದೆ ?

ಧೀರೇಂದ್ರ—ಮೊದಲು ಮೊದಲಿರುವ ಮೂರು ನಾಲ್ಕು ಪಂಕ್ತಿಗಳನ್ನು ಓದ ಬಲ್ಲೆ. ಎರಡನೇ ಪುಟದ ಮಧ್ಯಭಾಗದಲ್ಲಿರುವುದೂ ತಿಳಿಯು ದು. ಕಡೆಯಲ್ಲಿ ರುವ ಒಂದೆರಡು ಪಂಕ್ತಿಗಳೂ ವಿರಳ ವಿರಳವಾಗಿ ಬರೆಯಲ್ಪಟ್ಟಿರುವುವು. ಆದರೆ ಈ ಮಧ್ಯೆ ಕಾಣಿಸುವುದು ಅಷ್ಟು ಸ್ಪಷ್ಟವಾಗಿಲ್ಲ. ಕೆಲವೆಡೆಗಳಲ್ಲಿ ಅದನ್ನು ಓದು ವುದೇ ಅಸಾಧ್ಯವಾಗುವುದು.

ಅರಿಂ—ಅದರಿಂದ ತಾವು ಏನು ತಿಳಿಯೋಣಾಯಿತು ?

ಧೀರೇಂ—ತಾವು ತಿಳಿದುದೇನು ಹೇಳೋಣಾಗಲಿ.

ಅರಿಂ—ಅದನ್ನು ಹೊಗೆಯ ಬಂಡಿಯಲ್ಲಿ ಬರೆದುದೆಂದು.

ಧೀರೇಂ—ಅದು ಹೇಗೆ ?

ಅರಿಂ—ಇಲ್ಲಿ ಸ್ಪಷ್ಟವಾಗಿ ಬರೆಯಲ್ಪಟ್ಟುದೆಲ್ಲವೂ ನಿಲ್ದಾಣದಲ್ಲಿ ಬಂಡಿಯು ನಿಂತಿರುವಾಗ ಬರೆಯಲ್ಪಟ್ಟಿರುವುದು. ಸ್ವಲ್ಪ ಅಸ್ಪಷ್ಟವಾಗಿರುವುದು ಗಾಡಿಯು ಮುಂದುವರಿಯುತ್ತಿರುವಾಗ ಲಿಖಿತವಾದುದು. ತಿಳಿಯದೇ ಇರುವುದನ್ನು ಗಾಡಿ ಯು ಬಹಳವಾಗಿ ಅಲ್ಲಾಡಿದಾಗ ಬರೆದುದು. ಗಾಡಿಯು ಇಷ್ಟೊಂದು ಅಲ್ಲಾಡ ಬೇಕಾದರೆ ದಾರಿಯ ಮಧ್ಯೆ ಗಾಡಿಗಳು ಒಂದು ಕಂಬಿಯಿಂದ ಮತ್ತೊಂದು ಕಂಬಿಗೆ ಹೋಗುವಾಗ ಆಗುವುದು ಹೆಚ್ಚು ಸಂಭವ. ಹೀಗೆ ಗಾಡಿಯು ಅನೇಕ ವೇಳೆ ಒಂದು ಕಂಬಿಯಿಂದ ಮತ್ತೊಂದು ಕಂಬಿಗೆ ಹೋಗುವುದು ದೊಡ್ಡ ಪಟ್ಟಣದಿಂದ ಹೊರಡುವಾಗಲಾಗಲೀ, ಅಥವಾ ದೊಡ್ಡ ಪಟ್ಟಣವನ್ನು ಸೇರುವಾಗಲಾಗಲಿ ಸಂಭವ ಹೊಗೆಯಬಂಡಿಯಲಿ ಪ್ರಯಾಣಮಾಡುವಾಗ ಈ ಉಯಲನ್ನು ಬರೆದುದೆಂದು ಊಹಿಸಿದರೆ, ಆ ಹೊಗೆಯಬಂಡಿಯು ಎಕ್ಸ್‌ಪ್ರೆಸ್‌ಗಾಡಿಯಾಗಿರಬೇಕು. ಅದು ರೂಪನಗರದಿಂದ ಹೊರಟು ವಿಲಾಸನಗರಿಗೆ ಮುಟ್ಟುವ ವೇಳೆಗೆ ಒಂದೇಬಾರಿ ಮಧ್ಯೆ ನಿಲ್ದಾಣದಲ್ಲಿ ನಿಂತರೆ ಖಂಡಿತವಾಗುತ್ತೆ.

ಧೀರೇಂದ್ರನು ಗಟ್ಟಿಯಾಗಿ ನಗತೊಡಗಿದನು. ಬಳಿಕ "ಇದೆಲ್ಲವೂ ನಿಜವೆಂದು ನಂಬಿದರೂ ಪ್ರಕೃತ ಮೊಕದ್ದಮೆಗೂ ತಾವು ಹೇಳುವುದಕ್ಕೂ ಸಂಬಂಧವೇನು? ಕ್ಷಮಿ ಸಬೇಕು. ತಮ್ಮನ್ನು ನೋಡಿದರೆ ನಗದಿರಲಾರೆನು" ಎಂದನು.

ಅರಿಂ:— ಅಗತ್ಯವಾಗಿ ನಗಬಹುದು. ಆದರೆ ನಾನು ಹೇಳಿದುದರಿಂದ ನಿಶಾ ಕಾಂತಬಾಬುಗಳು ಹೇಳಿರುವ ಕಥೆಯು ಸ್ವಲ್ಪ ಸತ್ಯಾಂಶ ಉಳ್ಳುದೆಂದು ಸ್ವಲ್ಪಮಟ್ಟಿಗೆ ವ್ಯಕ್ತವಾಗುವುದು. ಆನಂದನು ರೂಪನಗರದಿಂದ ನೆನ್ನೆಯದಿನ ಪ್ರಯಾಣ ಮಾಡಿ ಇಲ್ಲಿಗೆ ಬಂದಾಗ ಈ ಉಯಿಲನ್ನು ಬರದಂತೆ ತೋರುವುದು, ಇದು ಬಹಳ ಆಶ್ಚರ್ಯ ಕರವಲ್ಲವೇ? ಉಯಿಲನ್ನು ಬರೆಯಲು ಬೇರೆ ಯಾವ ಸಮಯವೂ ಇಲ್ಲವೆ ಇದರಿಂದ

ತಿಳಿಯುಬರುವುದೇನೆಂದರೆ, ಆನಂದನು ಈ ಉಯಿಲಿನ ವಿಚಾರವನ್ನು ಅಷ್ಟಾಗಿ ಮನಸ್ಸಿನಲ್ಲಿ ಹಚ್ಚಿಕೊಂಡಿರಲಿಲ್ಲವೆಂದು. ಈ ಉಯಿಲಿನಿಂದ ಹೆಚ್ಚು ಉಪಯೋಗ ವಿಲ್ಲವೆಂದು ತಿಳಿದಿದ್ದರೆ ಯಾವನಾದರೂ ಹೀಗೆ ಪ್ರಯಾಣ ಸಮಯದಲ್ಲಿ ಇದನ್ನು ಬರೆಯುವ ಸಂಭವ.

ಧೀರೇಂ—ಉಯಿಲನ್ನು ಬರೆಯುತ್ತಲೇ ತನ್ನ ಮೃತಿಯನ್ನೂ ಒಡನೆಯೇ ಬರಮಾಡಿಕೊಂಡನು.

ಅರಿಂ—ತಾವು ಹಾಗೆ ನಿರ್ಧರಿಸೋಣಾಗುವುದೇ ?

ಧೀರೇಂ—ಮತ್ತೇನು ನಿರ್ಧಾರ ಮಾಡುವುದು ? ತಿಳಿದವರಾರನ್ನಾದರೂ ಕೇಳಿ ನೋಡಿರಿ, ಏನು ಹೇಳುವರು ?

ಅರಿಂ—ಇರಬಹುದು. ಆದರೂ ಈ ಮೊಕದ್ದಮೆಯೇನೋ ನನ್ನ ತಿಳಿವಿಗೇ ಬರಲಿಲ್ಲವಲ್ಲಾ !

ಧೀರೇಂ—ತಿಳಿವಿಗೇ ಬರಲಿಲ್ಲವೆ ? ಇದಕ್ಕಿಂತಲೂ ಸುಲಭವಾದ ಮೊಕದ್ದಮೆ ಯನ್ನು ನಾನು ನೋಡಿಯೇ ಇಲ್ಲ, ಈ ಹುಡುಗನಿಗೆ ವೃದ್ಧನು ಸಾಯುತ್ತಲೇ ಹಣವೆಲ್ಲವೂ ಬರುವುದೆಂದು ತಿಳಿಯುವುದು. ಒಡನೆಯೇ ಅವನು ಯಾರಿಗೂ ಹೇಳದೆ ಮುದುಕನನ್ನು ನೋಡಲು ಹೋಗಿದ್ದಾನೆ. ಮನೆಯಲ್ಲಿದ್ದುದು ಮುದುಕಿ ಯೊಬ್ಬಳು ಮಾತ್ರವೇ. ಅವಳೂ ನಿದ್ರಿಸಲು ಹೋದೊಡನೆಯೇ ಅವನನ್ನು ಸ್ವಂತ ದೊಣ್ಣೆಯಿಂದ ಹೊಡೆದುಹಾಕಿದ್ದಾನೆ. ಸಿಕ್ಕದಿರಬೇಕೆಂದು ಅವನನ್ನು ಮರದ ತುಂಡುಗಳಿದ್ದೆಡೆಗೆ ಸೆಳೆದುಕೊಂಡು ಹೋಗಿ ಸುಟ್ಟು ಬೂದಿಮಾಡಿದ್ದಾನೆ. ಒಡನೆಯೇ ಹೋಟೆಲಿಗೆ ಓಡಿಹೋಗಿದ್ದಾನೆ. ಆನಂದನ ಕೊಠಡಿಯಲ್ಲಿದ್ದ ಕಲೆಗಳೂ ದೊಣ್ಣೆಯ ಮೇಲಿನ ಕಲೆಯೂ ಸ್ವಲ್ಪ ಮಾತ್ರವೇ ಇರುವುದೆಂದೂ ಮೃತದೇಹವನ್ನು ಸುಟ್ಟರೆ ತನ್ನ ಕೃತಿಯು ಪತ್ತೆಯಾಗುವ ಸಂಭವವೇ ಇಲ್ಲವೆಂದೂ ಭಾವಿಸಿ ಹಾಗೆ ಮಾಡಿ ದ್ದಾನೆ. ಇದಕ್ಕಿಂತ ಹೆಚ್ಚು ಕುರುಹುಗಳು ಯಾವ ಮೊಕದ್ದಮೆಯಲ್ಲಿ ಸಿಕ್ಕುವುವು ?

ಅರಿಂ—ಇದೆಲ್ಲವನ್ನೂ ನಾನೂ ಬಲ್ಲೆ. ಆದರೆ, ಧೀರೇಂದ್ರಬಾಬು ! ಸ್ವಲ್ಪ ಬುದ್ಧಿಯನ್ನುಪಯೋಗಿಸೋಣಾಗಲಿ. ಉಯಿಲನ್ನು ಹೇಗಿದ್ದರೂ ತನ್ನ ಹೆಸರಿಗೇ ಮಾಡಿರುವಾಗ, ಸಿಶಾಕಾಂತ ಬಾಬುವು ಅದೇ ದಿನ ರಾತ್ರಿ ಖೂನಿಮಾಡಬೇಕಾದ ಸಂದರ್ಭವೇನು ? ಅದಲ್ಲದೆ ಅವನು ಒಳಗಿರುವನೆಂಬುದನ್ನು ಅವನನ್ನು ಒಳಕ್ಕೆ ಕಳುಹಿಸಿದ ವೃದ್ಧೆಯು ಬಲ್ಲಳು. ಅಂತಹ ಸಮಯದಲ್ಲಿ ಅವನು ಹತ್ಯೆ ಮಾಡ ಲೆತ್ನಿಸುವನೆ ? ಮೃತನ ದೇಹವನ್ನು ಮುಚ್ಚಿಡಲು ಅಷ್ಟು ಪ್ರಯತ್ನ ಮಾಡಿ ದವನು, ತಾನು ಸಿಕ್ಕಿಬೀಳಬೇಕೆಂಬ ಆಶೆಯಿಂದ ತನ್ನ ದೊಣ್ಣೆಯನ್ನು ಅಲ್ಲಿಯೇ ಬಿಟ್ಟು ಹೊರಟುಹೋಗುವನೆ ? ಇದೆಲ್ಲವನ್ನೂ ಯೋಚಿಸೋಣಾಗಲಿ. ಇವೆಲ್ಲವೂ ತಮ್ಮ ಬುದ್ಧಿಗೆ ದೂರವಾದುದೇನೂ ಅಲ್ಲ.

ಧೀರೇಂ—ಹತ್ಯಾಕಾರಿಯು ಗಾಬರಿಯಲ್ಲಿ ದೊಣ್ಣೆಯನ್ನು ಮರೆತು ಅಲ್ಲಿಯೇ ಬಿಟ್ಟು ಓಡಿಹೋಗಿರುವನು. ಪುನಃ ಕೊಟಡಿಗೆ ಬಂದು ಅದನ್ನು ತೆಗೆದುಕೊಂಡು ಹೋಗುವಷ್ಟು ಸಾಹಸವುಳ್ಳವನಾಗಲಿಲ್ಲ. ಬೇರೆ ಯಾವ ವಿಧವಾಗಿ ಈ ವಿದ್ಯಮಾನಗಳನ್ನು ಸರಿತೂಗಿಸುವಿರಿ, ಹೇಳೋಣಾಗಲಿ.

ಅರಿಂ—ಅದಕ್ಕೇನು ? ಹತ್ತಾರು ಬಗೆಯಲ್ಲಿ ಸರಿತೂಗಿಸಬಹುದು. ಯಾವನೋ ಚೋರನೊಬ್ಬನು ಮುದುಕನು ತೋರಿಸುತ್ತಿರುವ ಕಾಗದ ಪತ್ರಗಳನ್ನು ಕಿಟಕಿಯ ಮೂಲಕ ನೋಡಿಕೊಂಡಿದ್ದಾನೆ. ನಿಶಾಕಾಂತನು ಹೊರಟುಹೋಗುತ್ತಲೇ ಅವನು ಒಳಹೊಕ್ಕಿದ್ದಾನೆ. ಆನಂದನನ್ನು ಕೊಂದು, ದೇಹವನ್ನು ಬೂದಿ ಮಾಡಿ ಓಡಿಹೋಗಿದ್ದಾನೆ

ಧೀರೇಂ—ಚೋರನಾದವನು ದೇಹವನ್ನೇಕೆ ಸುಡಬೇಕು ?

ಅರಿಂ—ಹಾಗಾದರೆ, ನಿಶಾಕಾಂತನಾದರೂ ಹಾಗೇಕೆ ಮಾಡಬೇಕು ?

ಧೀರೇಂ—ಚೋರನು ಯಾವ ಚೋರತನವನ್ನೂ ಮಾಡದೆ ಹಾಗೆಯೇ ಓಡಿಹೋದನೇಕೆ ?

ಅರಿಂ—ಏಕಂದರೆ ಆ ಕಾಗದಪತ್ರಗಳಾವುವೂ ಅವನಿಗೆ ಉಪಯೋಗಕರಗಳಾಗಿ ಕಂಡುಬರಲಿಲ್ಲ.

ಧೀರೇಂದ್ರನು ಅಸಮ್ಮತಿ ಸೂಚಕವಾಗಿ ತಲೆಯನ್ನಲ್ಲಾಡಿಸುತ್ತಾ "ಅರಿಂದಮಬಾಬುಗಳೆ ! ತಾವು ತಮ್ಮ ಚೋರನನ್ನು ಪತ್ತೆಮಾಡೋಣಾಗಲಿ. ನಾವದುವರೆಗೆ ನಮಗೆ ಗುಮಾನಿಯಾದವನನ್ನು ಹಿಡಿದಿರುತ್ತೇವೆ. ಯಾರು ಸರಿಯಾಗಿ ಪತ್ತೆ ಮಾಡಿದರೆಂಬುದನ್ನು ಮುಂದೆ ತಿಳಿಯಬೇಕಾಗುತ್ತದೆ. ಆದರೆ ಹೇಳುವೆನು ಕೇಳಿ, ತಾವು ಈ ಅಂಶವನ್ನು ಮರೆತಂತಿದೆ. ನಮಗೆ ತಿಳಿದುದರಲ್ಲಿ ಯಾವ ಕಾಗದ ಪತ್ರವೂ ಹೋಗಿಲ್ಲ. ನಮ್ಮ ನಿಶಾಕಾಂತನೊಬ್ಬನೇ ಅದಕ್ಕೆ ಏಕಮಾತ್ರಾಧಿಕಾರಿಯಾದುದರಿಂದ ಯಾವುದನ್ನೂ ತೆಗೆದುಕೊಂಡು ಹೋಗುವ ಪ್ರಯತ್ನ ಮಾಡಿಲ್ಲ. ಇದರಿಂದ ನಿಶಾಕಾಂತನೇ ಆನಂದನ ಹತ್ಯಾಕಾರಿಯೆಂದು ದೃಢಪಡುವುದಿಲ್ಲವೆ ?" ಎಂದನು.

ಅರಿಂ—ತಾವು ಹೇಳುವುದರಲ್ಲಿ ನಿಜಾಂಶವಿಲ್ಲವೆಂದಲ್ಲ. ತಾವು ಹೇಳುವಂತೆ ಎಲ್ಲವನ್ನೂ ಮುಂದೆ ತಿಳಿಯಬೇಕು. ತಾವೀಗ ಹೊರಡೋಣಾಗಲಿ. ತಮ್ಮನ್ನು ಈ ದಿನವೇ ಕಾಣಲು ಬರುವೆನೆಂಬ ಭರವಸೆಯಿದೆ.

ಧೀರೇಂದ್ರನು ಅಭಿವಾದನ ಮಾಡಿ ಹೊರಟುಹೋದನು. ಇದೆಲ್ಲವನ್ನೂ ಮೌನವಾಗಿ ಕೇಳುತ್ತಕುಳಿತಿದ್ದ ರಾಧಾನಾಥನು "ಮಿತ್ರ ! ಮುಂದೇನು ಮಾಡುವೆ ?" ಎಂದು ಕೇಳಿದನು.

ಅರಿಂ—ಮೊದಲೇ ಹೇಳಿದಂತೆ ಹರಪುರ ಗ್ರಾಮಕ್ಕೆ ಹೊರಡುವೆನು.

ರಾಧಾ—ರೂಪನಗರಕ್ಕೆ ಹೋಗಬಾರದೇಕೆ ?

ಅರಿಂ— ಇಲ್ಲ ! ಪೋಲೀಸಿನವರು ಹತ್ಯೆಯ ವಿಷಯವನ್ನೇ ಬಹಳ ಮಾಡಿ ಹುಡುಕುತ್ತಿರುವರು. ಇದನ್ನು ಭೇದಿಸುವುದಕ್ಕೆ, ಇದಕ್ಕೆ ಮೊದಲು ನಡೆದ ಉಯಿಲಿನ ವಿಚಾರವನ್ನೂ ಸಂಬಂಧವಿಲ್ಲದವನಿಗೆ ಏಕೆ ಮಾಡಲ್ಪಟ್ಟಿತೆಂಬುದನ್ನೂ ತಿಳಿಯಬೇಕಾಗಿದೆ. ಅದನ್ನು ಮೊದಲು ತಿಳಿಯುವೆನು.

ರಾಧಾ—ನೀನೊಬ್ಬನೇ ಹೋಗುವೆಯಾ ?

ಅರಿಂ—ಅಷ್ಟೆ ! ಈಗೇನಗಾವ ಅಪಾಯವೂ ಇಲ್ಲ. ಅದರಿಂದ ನೀನು ಬರಬೇಕಾದ ಪ್ರಮೇಯವಿಲ್ಲ. ಅಪಾಯವಿದ್ದಿದ್ದರೆ ನಿನ್ನನ್ನು ಬಿಟ್ಟು ಹೊರಡು ತ್ತಿರಲಿಲ್ಲ. ಸಾಯಂಕಾಲದ ವೇಳೆಗೆ ಈ ನಿರ್ಭಾಗ್ಯನಾದ ನಿಶಾಕಾಂತನಿಗೆ ನನ್ನಿಂದ ಸಹಾಯವಾಗುವುದೇನೋ ನೋಡುವ.

ರಾಧಾನಾಥನು ತನ್ನ ಮನೆಗೆ ಹೊರಟುಹೋದನು. ಅರಿಂದಮಬಾಬುವು ಹೊರಗೆ ಹೊರಡಲು ಸಿದ್ಧನಾಗತೊಡಗಿದನು.

——

## ಪಂಚಮ ಪರಿಚ್ಛೇದ

———

ಅರಿಂದಮ ಬಾಬುವು ಹೊರಡುವ ವೇಳೆಗೆ ಆಗ ತಾನೇ ಬಿಸಿಲೇರುವ ಸಮಯ ವಾಗಿದ್ದಿತು. ಚಂಡಕಿರಣನ ತಾಪವು ವೃದ್ಧಿಯಾಗಲಾರಂಭವಾಗಿದ್ದಿತು. ಅವನು ಅದಾವುದನ್ನೂ ಲಕ್ಷ್ಯವಿಡದೆ ಹೊರಟುಬಿಟ್ಟಿದ್ದನು. ಅವನಿಗೆ ಆಹಾರದ ಮೇಲೆ ರುಚಿಯಿರಲಿಲ್ಲವಾಗಿ ಅಂದು ಏನನ್ನೂ ತೆಗೆದುಕೊಳ್ಳದೆ ನಿರಾಹಾರಿಯಾಗಿ ಹೊರಟನು. ಒಂದು ಬಂಡಿಯನ್ನು ಮಾಡಿಕೊಂಡು ಹರಪುರ ಗ್ರಾಮವನ್ನು ಸೇರಿದನು. ಅಲ್ಲಿ ವಿಚಾರಿಸುತ್ತ ಕಡೆಗೆ ನಿಶಾಕಾಂತನ ತಂದೆತಾಯಿಗಳ ಮನೆಯನ್ನು ಗೊತ್ತುಮಾಡಿ ಕೊಂಡು ಬಾಗಿಲ ಬಳಿ ಹೋಗಿ ಮೆಲ್ಲನೆ ತಟ್ಟಿದನು. ಒಳಗಿನಿಂದ ಹೆಂಗಸೊಬ್ಬಳು ಬಂದು ಬಾಗಿಲನ್ನು ತೆರೆದು "ಒಳಕ್ಕೆ ಬನ್ನಿ" ಎಂದು ಮರ್ಯಾದೆಯಿಂದ ಕರೆದಳು.

ಹೆಂಗಸಿಗೆ ವಯಸ್ಸು ಮೀರಿದ್ದಿತಾದರೂ ಅವಳ ಮುಖವನ್ನು ನೋಡಿದರೆ ಯೌವನದಲ್ಲಿ ಅನುಪಮ ಸುಂದರಿಯಾಗಿದ್ದಂತೆ ತಿಳಿಯುತ್ತಿದ್ದಿತು. ಅವಳು

ಸಾಮಾನ್ಯವಾದ ಉಡುಪನ್ನುಟ್ಟಿದ್ದಳು. ಅರಿಂದಮನು ಒಳಕ್ಕೆ ಹೋಗಿ, ಅವಳು ಹೇಳಿದ ಕಿರುಮನೆಯಲ್ಲಿ ಕುಳಿತನು. ಹೆಂಗಸು "ತಾವಾರು? ಇಲ್ಲಿಗೆ ಬಂದುದೇನು?" ಎಂದಳು.

ಅರಿಂ—ತಾಯಿ! ನೀವು ಕಷ್ಟದಲ್ಲಿರುವಿರೆಂಬುದನ್ನು ಬಲ್ಲೆ. ತಮ್ಮನ್ನುದ್ಧಾರ ಮಾಡಲು ಬಂದಿದ್ದೇನೆ.

ಹೆಂಗಸು—ನನ್ನ ಕಷ್ಟವು ಹಾಳಾಗಲಿ. ನಮ್ಮ ಹುಡುಗನನ್ನು ಯಾರಾದರೂ ಬಿಡಿಸಿದರೆ ಸಾಕಾಗಿದೆ. ತಾವು ಇಷ್ಟು ಒಳ್ಳೆಯವರಾಗಿ ತೋರುವಿರಿ. ನೀವಾರಪ್ಪ?

ಹೆಂಗಸು ನಿಶಾಕಾಂತನ ತಾಯಿಯೆಂದು ತಿಳಿಯಲು ಕಷ್ಟವಾಗಲಿಲ್ಲ. ಅವನು "ಅಮ್ಮಾ! ನನ್ನನ್ನು ಅರಿಂದಮನೆನ್ನುವರು" ಎಂದನು.

ಹೆಂಗಸು ಬೆಚ್ಚಿದವಳಂತಾಗಿ, "ಏನು, ತಾವೇ ಅರಿಂದಮ ಬಾಬುಗಳೆ! ತಮ್ಮ ಹೆಸರು ಕೇಳಿ ಬಲ್ಲೆ. ಅಹಾ! ನನ್ನ ಅದೃಷ್ಟಕ್ಕೆ ಪಾರವೇ ಇಲ್ಲವಾಯಿತು. ತಾವು ಬಂದುದು ನನ್ನ ಪುಣ್ಯ ವಿಶೇಷವೇ ಸರಿ. ತಮ್ಮ ಪ್ರತ್ಯುತ್ಪನ್ನ ಬುದ್ಧಿಯನ್ನು ಕೇಳಿ ಬಲ್ಲೆ. ತಾವು ನಿಜವಾಗಿಯೂ ನಮ್ಮನ್ನುದ್ಧಾರ ಮಾಡಬಲ್ಲಿರಿ. ನನ್ನ ಹುಡುಗನ ವಿಚಾರವನ್ನು ಬಲ್ಲಿರಷ್ಟೆ. ಅವನನ್ನು ಕಾಪಾಡೋಣಾಗಲಿ. ನಾನು ತಮಗೆ ಚಿರ ಋಣಿಯಾಗಿರುತ್ತೇನೆ" ಎಂದು ಮುಂತಾಗಿ ಹೇಳಿದಳು.

ಅರಿಂ—ನಿಮ್ಮ ಹುಡುಗ ನಿಶಾಕಾಂತ ಬಾಬುವನ್ನು ಬಲ್ಲೆ. ಅವನೇ ನನ್ನಲ್ಲಿಗೆ ಬಂದಿದ್ದನು.

ಹೆಂಗಸು—ನಿಮ್ಮಲ್ಲಿಗೆ ಬಂದಿದ್ದನೆ? ಹಾಗಾದರೆ ಸಂತೋಷ. ಈಗವನೆಲ್ಲಿ? ಇಲ್ಲಿಗೆ ತಮ್ಮೊಡನೆ ಕರತರದೆ ಒಬ್ಬರೇ ಬಂದಿರೇಕೆ?

ಅರಿಂ—ಈಗಾತನು ನನ್ನ ಪೋಷಣೆಯಲ್ಲಿಲ್ಲ.

ಹೆಂಗಸು—ಮತ್ತೆಲ್ಲಿ ಹೋಗಿರುವನು?

ಅರಿಂ—ಈಗ ಪೋಲೀಸು ಠಾಣೆಯಲ್ಲಿರುವನು.

ಹೆಂಗಸು ಗಟ್ಟಿಯಾಗೊಂದು ಬಾರಿ ಚೀತ್ಕರಿಸಿ "ಅಯ್ಯೋ! ಅವನು ಬಂದಿಯಾಗಿರುವನೆ? ಅವನಿಗಿನ್ನೇನು ಗತಿ? ಅವನು ರಾತ್ರಿ ಮನೆಗೆ ಬರಲಿಲ್ಲ. ಬೆಳಿಗ್ಗೆ ಪತ್ರಿಕೆಯಲ್ಲಿ ನೋಡಿದರೆ, ಅವನನ್ನು ಪೋಲೀಸರು ಹಿಡಿಯಲು ಪ್ರಯತ್ನ ಮಾಡಿದಂತೆ ತಿಳಿಯಿತು. ಈಗಾಗಲೇ ಅವನು ಕಾರಾಗೃಹದಲ್ಲಿರುವನೆ? ಅವನು ನಿಜವಾಗಿಯೂ ನಿರ್ದೋಷಿ. ಆ ಪಾಪಿ ಆನಂದನನ್ನು ಅವನು ಚೆನ್ನಾಗಿ

ನೋಡಿಯೂ ಇರಲಿಲ್ಲ. ನಮ್ಮ ಮಗುವು ಹಾಗೆಂದಿಗೂ ಹತ್ಯೆ ಮಾಡುವವನಲ್ಲ. ಇನ್ನಾರೋ ಆನಂದನನ್ನು ಹೊಡೆದುಹಾಕಿದ್ದಾರೆ. ನೀವು ಅವನನ್ನು ಬಿಡಿಸಬೇಕು" ಎಂದು ಪ್ರಲಾಪಿಸತೊಡಗಿದಳು.

ಅರಿಂ—ತಾಯಿ ! ತಾವು ಇಷ್ಟು ಅಧೀರರಾಗಬಾರದು. ನಮ್ಮ ಕರ್ತವ್ಯವನ್ನು ನಾವು ಲೋಪವಿಲ್ಲದಂತೆ ಮಾಡಿದರಾಯಿತು. ಮತ್ತಾವುದಕ್ಕೂ ತಾವು ಬಾಧ್ಯರಲ್ಲ. ಈಗ ಕೆಲವು ಪ್ರಶ್ನೆಗಳನ್ನು ಕೇಳಬೇಕೆಂದಿದ್ದೇನೆ. ತಾವು ಉತ್ತರ ಕೊಡುವಿರಾ ?

ಹೆಂಗಸು—ನನಗೆ ತಿಳಿದುದೆಲ್ಲವನ್ನೂ ಹೇಳುತ್ತೇನೆ. ಕೇಳೋಣಾಗಲಿ. ನನ್ನ ಮಗುವನ್ನು ಉಳಿಸಿದರೆ ಸಾಕು.

ಅರಿಂ—ನಿಶಾಕಾಂತರ ತಂದೆಯೆಲ್ಲಿ ?

ಹೆಂಗಸು—ಅವರೆ ? ಮಗುವನ್ನು ಹುಡುಕಿಕೊಂಡು ಬರಲು ಹೋದವರು ಇನ್ನೂ ಮನೆಗೇ ಬಂದಿಲ್ಲ.

ಅರಿಂ—ತಾವು ಆನಂದನನ್ನು ಬಲ್ಲಿರಾ ?

ಹೆಂಗಸು—ಚೆನ್ನಾಗಿಯೂ ಬಲ್ಲೆನು. ಅದರೆ ಈಗ ಸುಮಾರು ಹತ್ತುಹದಿನೈದು ವರ್ಷಗಳಿಂದೀಚೆಗೆ ನೋಡಿರುವುದು ಅಪರೂಪ. ಅವನೊಬ್ಬ ಪಾಪಿಷ್ಠ. ನರಿಯಂತಹ ಕುಯುಕ್ತಿ ಮನುಷ್ಯ. ಚಿಕ್ಕಂದಿನಿಂದಲೂ ಕೆಟ್ಟ ವಿದ್ಯೆಗಳಲ್ಲಿಯೇ ಬೆಳೆದವನು.

ಅರಿಂ—ಚಿಕ್ಕಂದಿನಿಂದಲೂ ಬಲ್ಲಿರಾ ?

ಹೆಂಗಸು—ಬಲ್ಲೆ. ನಮ್ಮ ತಂದೆತಾಯಿಗಳು ನನ್ನನ್ನು ಆನಂದನಿಗೇ ಕೊಟ್ಟು ವಿವಾಹ ಮಾಡಬೇಕೆಂದಿದ್ದರು. ನನಗೆ ಇದು ಸ್ವಲ್ಪವೂ ಇಷ್ಟವಿರಲಿಲ್ಲ. ಒಂದು ದಿನ ನನ್ನ ತಂದೆಯವರು ನನ್ನ ಫೋಟೋವೊಂದನ್ನು ಅವನಿಗೆ ಕಳುಹಿಸಿದ್ದರು. ಅದನ್ನು ನೋಡಿ ತಾನು ಮದುವೆಯಾಗುವುದಾಗಿ ಹೇಳಿದ್ದನು. ಬೇರೊಂದು ದಿನ ನಮ್ಮ ತಂದೆಯು ಅವನ ಮನೆಗೆ ಹೋಗಿದ್ದಾಗ ಅವನು ನಾಲ್ಕಾರು ಬೆಕ್ಕುಗಳನ್ನು ಒಂದು ಪೆಟ್ಟಿಗೆಯಲ್ಲಿ ಉಪಾಯದಿಂದ ಕೂಡಿ ಅವುಗಳಿಗೆ ಹಾಲು ನೀರು ಸಿಕ್ಕದಂತೆ ಮಾಡಿ ನರಳಿಸುತ್ತ ಪೀಡಿಸುತ್ತಿದ್ದುದನ್ನು ನೋಡಿದರು. ಅವರಿಗೆ ಅವನ ಕಠಿಣ ಸ್ವಭಾವವು ತಿಳಿದು ಬಂದು ಮದುವೆಯನ್ನು ನಿಲ್ಲಿಸಿಬಿಟ್ಟರು. ಕಡೆಗೆ ದರಿದ್ರರಾದರೂ ಒಳ್ಳೆಯ ಸ್ವಭಾವದವರಾದ ನನ್ನ ಪತಿಗೆ ಪತ್ನಿಯಾದೆನು. ಆ ಆನಂದನನ್ನು ಕಂಡರೆ ನನಗೆ ವೈಯುರಿಯುತ್ತಿದ್ದಿತು. ಅವನು ಖೂನಾದುದು ಒಳ್ಳೆಯದೇ ಆಯಿತೆಂದು ಹೇಳಬೇಕು.

ಅರಿಂ—ತಾಯಿ ! ತಾವು ಹಾಗೆ ಹೇಳಬಾರದು. ಧೀರೇಂದ್ರಬಾಬುಗಳು ತಮ್ಮ ಈ ಮಾತನ್ನು ಕೇಳಿದ್ದರೆ ಅವರ ಸಂಶಯವು ದೃಢಪಟ್ಟಿತೆಂದುಕೊಳ್ಳುತ್ತಿದ್ದರು.

ಹೆಂಗಸು—ತಾವು ಹೇಳುವುದು ಸರಿಯೇ. ಆದರೆ ತಾವೇ ಯೋಚಿಸಿ ನೋಡೋಣಾಗಲಿ. ನನ್ನ ಚಿತ್ರವನ್ನು ಅವನು ಹಿಂದಕ್ಕೆ ಕಳುಹಿದ್ದಾನೆ.

ಹೀಗೆ ಹೇಳುತ್ತ ಹೆಂಗಸು ಒಳಕ್ಕೆ ಹೋಗಿ ಒಂದು ಭಾವಚಿತ್ರವನ್ನು ತಂದು ತೋರಿದಳು. ಆ ಭಾವಚಿತ್ರದಲ್ಲಿದ್ದ ಮುಖವನ್ನು ಯಾರೋ ಅಲ್ಲಲ್ಲಿ ಕೆತ್ತಿ ಹಾಕಿದ್ದರು. ಕಣ್ಣುಗಳನ್ನು ಚುಚ್ಚಿಬಿಟ್ಟಿದ್ದರು. ಹೆಂಗಸು ಹೇಳಿದಳು—"ನೋಡಿದಿರಷ್ಟೆ. ಆ ಪಾಪಿಯು ನನ್ನನ್ನು ಶಪಿಸಿ ನನ್ನ ಮದುವೆಯ ದಿನ ಇದನ್ನು ಕಳುಹಿದ್ದಾನೆ. ಅವನ ಮೇಲಿನ ಕ್ರೋಧವು ದಿನೇ ದಿನೇ ವೃದ್ಧಿಯಾಗಲೆಂದು ಇದನ್ನು ಹಾಗೆಯೇ ಇಟ್ಟಿದ್ದೇನೆ."

ಅರಿಂ— ಈಗೆಲ್ಲವನ್ನೂ ಪಶ್ಚಾತ್ತಾಪದಿಂದ ಕ್ಷಮಿಸಿದ್ದಾನೆ.

ಹೆಂಗಸು —ಅದು ಹೇಗೆ ?

ಅರಿಂ— ಅವನ ಆಸ್ತಿ ಎಲ್ಲಕ್ಕೂ ನಿಮ್ಮ ನಿಶಾಕಾಂತನೇ ಸರ್ವಾಧಿಕಾರಿಯಾಗಿದ್ದಾನೆ.

ಹೆಂಗಸು—ಛೀ ! ಅವನ ಆಸ್ತಿಯು ಇಂದೇ ನಾಶವಾಗಿಹೋಗಲಿ. ಅವನದೊಂದು ಕುರುಡು ಕಾಸೂ ನಮಗೆ ಬೇಡ. ಅವನ ಹಣವನ್ನು ಮುಟ್ಟಿದರೆ ನಮ್ಮ ವಂಶವೇ ನಿರ್ನಾಮವಾಗಬೇಕಾದೀತು. ಪ್ರಪಂಚದಲ್ಲಿ ಒಳ್ಳೆಯವರಿಗೆ ಎಂದಾದರೂ ಭಗವಂತನು ಸಹಾಯ ಮಾಡುವನು. ಆ ಪಾಪಿಯ ಹಣವನ್ನು ನಾವು ಗಳಿಸಿಕೊಂಡರೆ ನಮಗೆ ಇರುವ ಸಹಾಯವೂ ಕಡಮೆಯಾದೀತು. ಆ ಭಗವಂತನೇ ಅವನಿಗೆ ತಕ್ಕುದನ್ನು ಮಾಡಿರುವನು. ಆತನಿಗೆ ಯಾವಾಗ ದಯ ಬರುವುದೋ ತಿಳಿದವರಾರು ! ಆತನೇ ನಮ್ಮ ಮಗುವು ನಿರ್ದೋಷಿಯೆಂಬುದನ್ನು ತೋರಿಸಿಕೊಡುವನು.

ಅರಿಂದಮನು ಮತ್ತೇನನ್ನೂ ಕೇಳಲಿಲ್ಲ. ತನ್ನ ಪತ್ತೆಗೆ ಯಾವ ಅನುಕೂಲವೂ ಉಂಟಾಗದಿದ್ದುದನ್ನು ನೋಡಿ ಸ್ವಲ್ಪ ಖಿನ್ನನಾದನು. ನಿಶಾಕಾಂತನ ನಿರ್ದೋಷಿತ್ವವನ್ನು ಪ್ರತಿಪಾದನೆ ಮಾಡಲು ಸಾಕಾದಷ್ಟು ಅಂಶವಾವುದೂ ಸ್ಥಿರಪಡಲಿಲ್ಲ. ಅವನು ನಿಶಾಕಾಂತನ ತಾಯಿಂದ ಬೀಳ್ಕೊಂಡು ರೂಪನಗರಾಭಿಮುಖವಾಗಿ ಹೊರಟುಹೋದನು.

---

## ಷಷ್ಠ ಪರಿಚ್ಛೇದ

---

ಆನಂದನು ವಾಸಮಾಡುತ್ತಿದ್ದ ಮನೆಯು ದೊಡ್ಡ ಬಂಗಲೆ. ಗಟ್ಟಿಯಾದ ಇಟ್ಟಿಗೆಗಳಿಂದ ಕಟ್ಟಿದ್ದನು. ಅವನೇ ಸ್ವಂತವಾಗಿ ನಿಂತು ಅದನ್ನು ಕಟ್ಟಿಸಿದ್ದನೆಂದು

ಅನೇಕರು ಹೇಳಿಕೊಳ್ಳುತ್ತಿದ್ದರು. ಮನೆಯು ಮಧ್ಯಭಾಗದಲ್ಲಿದ್ದು ಅದರ ಸುತ್ತಲೂ ಬಹಳ ಸ್ಥಳವಿದ್ದಿತು. ಮನೆಯ ಮುಂದೆ ಹಸುರು ಹಸುರಾಗಿ ಕಾಣುವಂತೆ ಹುಲ್ಲನ್ನು ಕತ್ತರಿಸಿದ್ದರು. ಮನೆಯ ಹಿಂಭಾಗದಲ್ಲಿ ಮರದ ತುಂಡುಗಳನ್ನು ಶೇಖರಿಸಿದ್ದ ಪ್ರದೇಶ. ಅಲ್ಲಿಯೇ ಅಗ್ನಿಜ್ವಾಲೆಯೆದ್ದು ಅನಾಹುತವನ್ನು ಮೊದಲು ಸೂಚಿಸಿದ್ದುದು. ಅರಿಂದಮನು ಆನಂದನ ಮನೆಯ ಬಳಿಗೆ ಬಂದು ನೋಡಿದನು ಅಲ್ಲಿ ಧೀರೇಂದ್ರ ಬಾಬುವಿರಲಿಲ್ಲ. ಹೆಡ್‌ಕಾನ್ಸ್ಟೇಬಲನೊಬ್ಬನು ತನ್ನ ದರ್ಪ ಪ್ರಕಾಶ ಮಾಡುತ್ತ ಮಂಡಿಸಿದ್ದನು. ಅವನು ಅರಿಂದಮನನ್ನು ನೋಡಿ ಅಭಿವಾದನಮಾಡಿ “ ಬಾಬುಗಳೆ! ಈ ದಿನ ಮತ್ತೊಂದು ಹೊಸ ವಿಷಯವನ್ನು ಕಂಡುಹಿಡಿದಿದ್ದೇವೆ ” ಎಂದನು.

ಅರಿಂದಮನು ಚಕಿತನಾಗಿ ಅದೇನೆಂದು ಕೇಳಿದನು. ಅಧಿಕಾರಿಯು ಮಾತನಾಡದೆ ತನ್ನ ಕಿಸೆಯಲ್ಲಿದ್ದ ಅರ್ಧ ಮಸಕಾಗಿದ್ದ ಲೋಹದ ಸಣ್ಣ ಬಿಲ್ಲೆಗಳೆರಡನ್ನು ತೆಗೆದು ತೋರಿಸಿದನು. ಅರಿಂದಮನು ಅದನ್ನು ನೋಡಿದನು. ಅವು ಆನಂದನ ಷರಾಯಿಯ ಗುಂಡಿಗಳಾಗಿದ್ದುವು. ಅದರಲ್ಲಿ ಆನಂದನ ದರ್ಜಿಯ ಹೆಸರು ಕೂಡ ಕಾಣಿಸುತ್ತಿದ್ದಿತು. ಅರಿಂದಮನು ಅವನ್ನು ಹಿಂದಕ್ಕೆ ಕೊಟ್ಟು “ ಇದರಿಂದೇನು ತಿಳಿದಿರಿ ? ” ಎಂದನು.

ಅಧಿಕಾರಿ— ಮತ್ತೇನೂ ಸಂದೇಹವೇ ಇಲ್ಲ. ಅವನ ಷರಾಯಿಯ ಸಮೇತ ಸುಟ್ಟುಹಾಕಿದ್ದಾರೆ.

ಅರಿಂದಮನು ಯಾವ ಭಾವವನ್ನೂ ಪ್ರಕಟಿಸದೆ, ಮರದ ತುಂಡುಗಳಿದ್ದ ಪ್ರದೇಶವನ್ನೂ ಮನೆಯ ಹೊರಗಡೆ ಇತರ ಪ್ರದೇಶಗಳನ್ನೂ ಪರೀಕ್ಷಿಸತೊಡಗಿದನು. ಯಾವುದೋ ಭಾರವಾದ ಪದಾರ್ಥವನ್ನು ಮರಗಳ ಕಡೆಗೆ ಎಳೆದುಕೊಂಡುಹೋದಂತೆ ತಿಳಿಯಬಂದುದೇ ಹೊರತು ಮತ್ತಾವ ಹೊಸ ವಿಷಯವೂ ಹೊರಡಲಿಲ್ಲ. ಹೆಜ್ಜೆಯ ಗುರುತುಗಳಾವುವೂ ಕಂಡುಬರಲಿಲ್ಲ.

ಅರಿಂದಮನು ಮನೆಯನ್ನು ಪ್ರವೇಶಿಸಿ ಆನಂದನ ಮಲಗುವ ಕೊಠಡಿಗೆ ಹೋದನು. ಅಲ್ಲಿ ರಕ್ತದ ಕುರುಹುಗಳು ಹೆಚ್ಚಾಗಿ ಕಂಡುಬರಲಿಲ್ಲ. ಅಲ್ಲಲ್ಲಿ ಸ್ವಲ್ಪ ಸ್ವಲ್ಪ ತಿಳಿಯುತ್ತಿದ್ದುದು. ಅವೆಲ್ಲವೂ ಹೊಸ ಕಲೆಗಳೆಂದೇನೋ ಸ್ಪಷ್ಟವಾಗಿ ತಿಳಿಯುತ್ತಿದ್ದುವು. ದೊಣ್ಣೆಯು ನಿರಾಕಾಂತನದೆಂಬುದನ್ನು ತೋರಿಸಲು ಅವನ ಹೆಸರಿನಿಂದ ಕೂಡಿದ ಹಿಡಿಯೇ ಅದಕ್ಕೆ ಹಾಕಲ್ಪಟ್ಟಿದ್ದಿತು. ಅವರಿಬ್ಬರ ಕಾಲಿನ ಗುರುತುಗಳು ಕಂಡುಬರುತ್ತಿದ್ದುವೇ ವಿನಹ ಮೂರನೆಯವರ ಕುರುಹುಗಳಾವುವೂ ಅಲ್ಲಿ ಕಂಡುಬರಲೇ ಇಲ್ಲ. ಇದೆಲ್ಲವನ್ನೂ ನೋಡಿ ಅರಿಂದಮನು ಖಿನ್ನನಾಗಿ “ ನನ್ನ ಮನಸ್ಸೇನೋ ಅವನು ನಿರ್ದೋಷಿಯೆಂದು ಹೇಳುವುದಲ್ಲಾ ! ರುಜುವಾತುಗಳೆ

ಲ್ಲವೂ ಅವನಿಗೆ ವಿರೋಧವಾಗಿವೆ. ಅವನು ಹೇಳಿದುದು ನಿಜವೆಂದು ನನಗೇನೋ ದೃಢಪಡುತ್ತಿದ್ದರೂ ಸಾಕಾದಷ್ಟು ರುಜುವಾತು ಮಾಡದೆ ಬಿಡುವುದು ಹೇಗೆ ? ಎಂದು ಹೇಳಿಕೊಳ್ಳುತ್ತಿದ್ದನು.

ಬಳಿಕ ಆನಂಡನ ಕಬ್ಬಿಣದ ಪೆಟ್ಟಿಗೆಯನ್ನು ತೆಗೆದು ಕಾಗದಪತ್ರಗಳೆಲ್ಲವನ್ನೂ ನೋಡಿದನು. ಕೆಲವು ಪತ್ರಗಳು ಮೇಜಿನ ಮೇಲೆಯೇ ಇದ್ದುವು. ಕೆಲವು ಪತ್ರ ಗಳನ್ನು ಮೊಹರು ಮಾಡಿದ್ದರು. ಕೆಲವನ್ನು ಪೋಲೀಸರು ತೆಗೆದು ನೋಡಿದ್ದರು. ಆದರೆ ಕೆಲವು ಮುಖ್ಯ ಕಾಗದಪತ್ರಗಳು ಮಾತ್ರ ಅಲ್ಲಿರಲಿಲ್ಲ. ಅವನ ಲೇವಾದೇವಿಯ ಪುಸ್ತಕಗಳನ್ನು ನೋಡುವಲ್ಲಿ, ಅವನ ಬಳಿ ಹೆಚ್ಚು ಹಣವಿದ್ದಂತೆ ತೋರಿಬರಲಿಲ್ಲ. ಅವನನ್ನು ಎಲ್ಲರೂ ಎಷ್ಟರಮಟ್ಟಿಗೆ ಧನಿಕನೆಂದು ತಿಳಿದಿದ್ದರೋ ಅಷ್ಟು ದೃಢಪಡಲು ಆ ಪತ್ರಗಳಲ್ಲಿ ಸಾಕಾದಷ್ಟು ರುಜುವಾತಿರಲಿಲ್ಲ. ಕೆಲವು ಮುಖ್ಯ ಪತ್ರಗಳ ವಿಷಯವು ಮಾತ್ರ ಅಲ್ಲಲ್ಲಿ ಬರೆಯಲ್ಪಟ್ಟದ್ದಿತೇ ಹೊರತು ಆ ಪತ್ರಗಳಾವುವೂ ಅಲ್ಲಿರಲಿಲ್ಲ.

ಅರಿಂದಮನು ಆ ಮನೆಯಲ್ಲಿದ್ದ ವೃದ್ಧೆಯನ್ನು ಹೋಗಿ ನೋಡಿದನು. ಇವ ಳಿಂದಾವ ಅಂಶವಾದರೂ ಹೊರಪಡಬಹುದೆಂದು ಯೋಚಿಸಿ ಯಾವಾವ ಪ್ರಶ್ನೆ ಗಳನ್ನೋ ಮಾಡತೊಡಗಿದನು. ಅವಳು ಹೆಚ್ಚಾಗಿ ಮಾತನಾಡುತ್ತಲೇ ಇರಲಿಲ್ಲ. ಆಗಾಗ ಆ ಕಡೆ ಈ ಕಡೆ ನೋಡುತ್ತಾ ಕಣ್ಣುಗಳನ್ನು ಅರಿಂದಮನ ಕಡೆಗೆ ತಿರುಗಿಸದೆ ಮುಖ ಗಂಟು ಹಾಕಿಕೊಂಡು ನಾಲ್ಕಾರು ಮಾತುಗಳನ್ನು ಹೇಳಿದಳು.

ಅರಿಂ—ನೀನೆಷ್ಟು ದಿನದಿಂದ ಈ ಮನೆಯಲ್ಲಿರುವೆ ?

ವೃದ್ಧೆ—ನಲವತ್ತು ವರ್ಷಗಳಿಂದ.

ಅರಿಂ—ನೀನೇ ನಿಶಾಕಾಂತನನ್ನು ಆ ದಿನ ರಾತ್ರಿ ಒಳಕ್ಕೆ ಕರೆತಂದೆಯೋ ?

ವೃದ್ಧೆ—ಅಹುದು. ಆದಕ್ಕೆ ಮೊದಲೇ ನನ್ನ ಕೈ ಸುಟ್ಟುಹೋಗಿದ್ದರೆ ಚೆನ್ನಾ ಗಿರುತ್ತಿತ್ತು!

ಅರಿಂ—ನೀನು ಮಲಗಿದಾಗ ಸುಮಾರು ಎಷ್ಟು ಹೊತ್ತು ?

ವೃದ್ಧೆ—ಹತ್ತೂವರೆಯಿರಬಹುದು.

ಅರಿಂ—ನೀನು ನಿತ್ಯವೂ ಮಲಗುವುದೆಲ್ಲಿ ?

ವೃದ್ಧೆ—ಅದೋ, ಆ ಕಡೆಯ ಕೊಠಡಿಯಲ್ಲಿ.

ಅರಿಂ—ನಿನಗೆ ಈ ವಿಚಾರವು ತಿಳಿದುದಾವಾಗ ?

ವೃದ್ಧೆ—ಬೆಂಕಿ ಬೆಂಕಿ ಎಂಬ ಕೂಗಿನಿಂದ ನನಗೆ ಎಚ್ಚರವಾಯಿತು. ಓಡಿ ಹೋಗಿ ನೋಡಿದೆನು. ನನ್ನ ಒಡೆಯನಿರಲಿಲ್ಲ ಅವರನ್ನಾರೋ ಖೂನ್ ಮಾಡಿ ರಬೇಕು.

ಅರಿಂ—ನಿಶಾಕಾಂತನ ದೊಣ್ಣೆಯನ್ನು ಬಲ್ಲೆಯಾ ?

ವೃದ್ಧೆ—ಚೆನ್ನಾಗಿ ಬಲ್ಲೆ. ಅವನು ತನ್ನ ರುಮಾಲನ್ನು ಮನೆಯ ಮುಂದೆ ಇರುವ ಕಿರುಮನೆಯಲ್ಲಿ ತೆಗೆದುಕೊಟ್ಟು ಹೊರಟುಹೋದನು. ದೊಣ್ಣೆಯನ್ನೂ ಅಲ್ಲಿಯೇ ಬಿಟ್ಟಿರಬೇಕೆಂದು ನನ್ನ ಭಾವನೆ. ನನಗೆ ಚೆನ್ನಾಗಿ ಜ್ಞಾಪಕವಿಲ್ಲ.

ಅರಿಂ—ಅವನಿಗೆ ಯಾರಾದರೂ ಶತ್ರುಗಳಿದ್ದರೇ ?

ವೃದ್ಧೆ—ಶತ್ರುಗಳಾರಿಗಿಲ್ಲ ? ಆದರೆ ಆನಂದನು ತನ್ನಷ್ಟಕ್ಕೆ ತಾನಿರುತ್ತಿದ್ದನು. ವ್ಯಾಪಾರಕ್ಕಾಗಿ ಒಬ್ಬಿಬ್ಬರನ್ನು ನೋಡುತ್ತಿದ್ದನು.

ಅರಿಂ—ಈ ಅಧಿಕಾರಿಯು ಬಳಿಯಿರುವ ಗುಂಡಿಗಳನ್ನು ಬಲ್ಲೆಯಾ ?

ವೃದ್ಧೆ—ಬಲ್ಲೆ. ಆನಂದನು ಹತ್ಯೆಯಾದ ದಿನ ಹಾಕಿಕೊಂಡಿದ್ದ ಷರಾಯಿಯ ಗುಂಡಿಗಳು.

ಅರಿಂ—ನೀನು ಓಡಿಹೋದಾಗ ಉರಿಯು ಬಹಳವಾಗಿತ್ತೆ ?

ವೃದ್ಧೆ—ಅಹುದು. ಬಹಳ ದಿನಗಳಿಂದ ಮಳೆಯಿಲ್ಲದಿದ್ದುದರಿಂದ ಒಡನೆಯೇ ಮರಗಳು ಹತ್ತಿ ಉರಿಯುತ್ತಿದ್ದುವು. ದೇಹವನ್ನು ಸುಟ್ಟಂತೆ ಅಲ್ಲಿ ವಾಸನೆಯಿದ್ದಿತು.

ಅರಿಂ—ಆನಂದನ ಕಾಗದ ಪತ್ರಗಳ ವಿಚಾರವೇನಾದರೂ ನಿನಗೆ ಗೊತ್ತೆ ?

ವೃದ್ಧೆ—ನನಗವಾವುದೂ ತಿಳಿಯದು. ಅವನ ಗುಟ್ಟಿನ ವಿಚಾರಗಳಾವುವನ್ನೂ ಬಲ್ಲವಳಲ್ಲ.

ಅರಿಂದಮನು ಖಿನ್ನಮನಸ್ಕನಾಗಿ ಅಲ್ಲಿಂದ ಹೊರಟು ತನ್ನ ಮನೆಗೆ ಬಂದು ಬಿಟ್ಟನು. ಅಲ್ಲಿ ರಾಧಾನಾಥನು ಇವನಿಗಾಗಿಯೇ ಕಾದಿದ್ದವನು " ಏನು ಸಮಾಚಾರ " ಎಂದು ಕೇಳಿದನು.

ಅರಿಂದಮ—ಎಲ್ಲವೂ ಕೆಟ್ಟ ಸಮಾಚಾರ. ಈ ಮೊಕದ್ದಮೆಯಲ್ಲಿ ನಾನು ಸೋಲುವಂತೆ ಕಾಣುವುದು.

ರಾಧಾ—ಅವೇಕೆ ?

ಅರಿಂ—ಯಾವ ವಿಷಯವೂ ಹೊರಪಡಲಿಲ್ಲ. ಆದರೆ ಮೂರು ವಿಷಯಗಳನ್ನು ಮಾತ್ರ ಸ್ವಲ್ಪ ಯೋಚಿಸುತ್ತಿದ್ದೇನೆ.

ರಾಧಾ—ಅದಾವುವು ?

ಅರಿಂ—ನಾನು ನೋಡಿದುದರಲ್ಲಿ ಅನಂದನ ಕೊಠಡಿಯಲ್ಲಿ ನಡೆಯುವುದೆಲ್ಲವನ್ನೂ ಕಿಟಕಿಯ ಮೂಲಕ ಯಾವನು ಬೇಕಾದರೂ ಬೀದಿಯಲ್ಲಿ ನಿಂತೇ ನೋಡಲನುಕೂಲವಿದೆ. ಇದೇ ಮೊದಲನೆಯ ವಿಷಯ.

ರಾಧಾ—ಎರಡನೆಯದು ?

ಅರಿಂ—ಆನಂದನ ಮುಖ್ಯ ಕಾಗದ ಪತ್ರಗಳು ಕೆಲವು ಕಂಡುಬರುವುದಿಲ್ಲ ಅವನ್ನು ನೋಡಿದರೆ ಹತ್ಯಾಕಾರಿಗೆ ಯಾವ ಪ್ರಯೋಜನ ? ನಿಶಾಕಾಂತನು ಅವನು

ಹಾರಿಸುವ ಪ್ರಮೇಯವಿಲ್ಲ. ಏಕೆಂದರೆ ಅವನೇ ಅವೆಲ್ಲಕ್ಕೂ ಉತ್ತರಾಧಿಕಾರಿ. ಅವನು ಅವನ್ನು ಕದಿಯಲೇಕೆ ?

ರಾಧಾ--ಇದರಿಂದ ಧೀರೇಂದ್ರನು ಸೋತಂತಾಯಿತಲ್ಲವೇ ?

ಅರಿಂ—ನಿಜ. ಆದರೆ ಹತ್ಯಾಕಾರಿಯಾರೋ ಸಿಕ್ಕಿಲ್ಲ. ನ್ಯಾಯಾಧಿಪತಿಯು ನನ್ನ ಬರೀ ಮಾತುಗಳನ್ನು ಕೇಳಿ ನಿಶಾಕಾಂತನನ್ನು ಬಿಡುವನೆ ?

ರಾಧಾ—ಅದಿರಲಿ. ಮೂರನೆಯ ವಿಷಯವೇನು ?

ಅರಿಂ—ಆ ವೃದ್ಧೆ-ಆನಂದನ ಪರಿಚಾರಿಕೆಯ ವಿಷಯದಲ್ಲಿ ನನಗೆ ಸಂಶಯ. ಅವಳು ಏನನ್ನೋ ತಿಳಿದಿದ್ದು ಹೇಳಲಾರದವಳಂತೆ ಇದ್ದಳು. ಇದೇ ನನ್ನ ನಂಬಿಕೆ.

ರಾಧಾ—ಹಾಗಾದರೆ ಮುಂದೆ ಪತ್ತೆಮಾಡಿದರಾಯಿತು.

ಅರಿಂ—ಈಗ ಕಾಲವಿಳಂಬಕ್ಕೆ ಸಮಯವೆ ? ನಾನು ಪತ್ತೆಹಚ್ಚುವಷ್ಟರಲ್ಲಿ ನಿಶಾಕಾಂತನನ್ನು ಗಲ್ಲಿಗೇರಿಸಿಬಿಡುವರು.

ರಾಧಾ—ಹಾಗಾದರೆ ಉಪಾಯವೇನು ?

ಅರಿಂ—ಏನೂ ತೋರಲಿಲ್ಲ. ನನ್ನ ಸೋಲನ್ನೊಪ್ಪಿಕೊಳ್ಳುವುದೇ ಉಪಾಯ.

ರಾಧಾ—ನಿಶಾಕಾಂತನನ್ನು ನಿರ್ದೋಷಿಯೆಂದು ನೋಡಿದರೇನೇ ಹೇಳಬಹುದಲ್ಲ.

ಅರಿಂ—ಈ ರುಜುವಾತುಗಳನ್ನು ಬಿಟ್ಟು ಬರೀ ನೋಡುವುದರಿಂದೇನಾದೀತು ? ನಾನು ಬಲ್ಲೆ ಅವನು ನಿರ್ದೋಷಿ. ಅದರೆ ಅದನ್ನು ರುಜುವಾತು ಮಾಡಲಾರದವನಾಗಿದ್ದೇನೆ. ಒಂದು ವಿಷಯ ಮಾತ್ರ ಯೋಚಿಸತಕ್ಕುದಾಗಿದೆ. ಲೆಕ್ಕಪತ್ರಗಳನ್ನು ನೋಡಿದರೆ ಆನಂದನ ಬಳಿ ಹೆಚ್ಚು ಹಣವೇ ಇದ್ದಂತಿಲ್ಲ. ಅವನು ಹೋದ ವರುಷ ಬಹಳ ಹಣವನ್ನು ರಮಾಕಾಂತನೆಂಬುವನಿಗೆ ಕಳುಹಿಸಿ ಚೆಕ್ಕು ಬರೆದುಕೊಟ್ಟಿದ್ದಾನೆ. ಈ ರಮಾಕಾಂತನಾರು ? ಅವನಿಗೆ ಹೀಗೆ ಬೇಗಬೇಗನೆ ಚೆಕ್ಕು ಬರೆದುಕೊಡಲು ಕಾರಣವೇನು ? ರಮಾಕಾಂತನ ಸುಳಿವನ್ನು ತೋರಿಸಲು ಯಾವ ಕಾಗದದಲ್ಲಿಯೂ ಯಾವ ಗುರುತೂ ಇಲ್ಲ. ಈಗ ಬ್ಯಾಂಕಿಗೆ ಹೋಗಿ ಈ ಚೆಕ್ಕುಗಳ ಹಣವನ್ನು ವಶಪಡಿಸಿಕೊಂಡಿರುವವನಾವನೆಂದು ತಿಳಿಯುವುದು ಮುಖ್ಯವಾದ ಕೆಲಸವಾಗಿದೆ. ಆದರೇನೋ ನಾನು ಗೆಲ್ಲುವೆನೆಂಬ ಭರವಸೆಯೇ ಮುರಿದುಹೋಗಿದೆ.

ಹೀಗೆ ಹೇಳುತ್ತ ಅರಿಂದಮನು ಅವನತ ಶಿರಸ್ಕನಾಗಿ ಕುಳಿತನು. ರಾಧಾನಾಥನು ಅವನಿಗೆ ಸಮಾಧಾನ ಹೇಳತೊಡಗಿದನು.

—

# ಸಪ್ತಮ ಪರಿಚ್ಛೇದ

ಆ ದಿನ ರಾತ್ರಿ ಅರಿಂದಮನಿಗೆ ನಿದ್ದೆ ಹಿಡಿಯಲಿಲ್ಲ. ಬಹಳ ಹೊತ್ತಿನವರೆಗೆ ಕುರ್ಚಿಯ ಮೇಲೆ ಕುಳಿತು ಯೋಚಿಸುತ್ತಿದ್ದನು. ರಾಧಾನಾಥನು ಮನೆಗೆ ಹೊರಟು ಹೋದವನು ಪುನಃ ಪ್ರಾತಃಕಾಲದವರೆಗೆ ಬರಲಿಲ್ಲ. ಅವನು ಪುನಹ ಬಂದಾಗ ಅರಿಂದಮಬಾಬುವು ಇನ್ನೂ ಕುರ್ಚಿಯ ಮೇಲೆಯೇ ಕುಳಿತಿದ್ದನು. ಪ್ರಾತಃಕಾಲ ಪ್ರಕಟವಾಗುವ ಪತ್ರಿಕೆಗಳೆಲ್ಲವೂ ಅವನ ಮೇಜಿನ ಮೇಲಿದ್ದುವು. ಸಮೀಪದಲ್ಲಿಯೇ ಒಂದು ಟೆಲಿಗ್ರಾಮು ಪತ್ರವಿದ್ದಿತು. ರಾಧಾನಾಥನು ಬರುತ್ತಲೇ ಅವನ ಮಿತ್ರನು ಆ ತಂತಿಯ ಸಮಾಚಾರವನ್ನು ಅವನ ಕೈಗೆ ಕೊಟ್ಟನು. ಅವನು ಅದನ್ನು ಗಟ್ಟಿಯಾಗಿ ಓದಿದನು.

“ ಬಹಳ ಮುಖ್ಯವಾದ ರುಜುವಾತೊಂದು ದೊರೆತಿದೆ. ನಿಶಾಕಾಂತನ ತಪ್ಪು ಸ್ಥಾಪಿತವಾಯಿತು. ಮೊಕದ್ದಮೆಯನ್ನು ಬಿಟ್ಟು ವಿಶ್ರಾಂತಿ ಹೊಂದೋಣಾಗಲಿ. ವಂದನೆಗಳು.

ಇತಿ ಪತ್ತೇದಾರ್ ಧೀರೇಂದ್ರಬಾಬು

ರಾಧಾನಾಥನು ಓದುತ್ತಲೇ ಅವನ ಮುಖವು ಮ್ಲಾನವಾಯಿತು. ಇದೇನೋ ವಿಪರೀತವಾಗಿದೆಯೆಂದನು.

ಅರಿಂ—ಇದು ಧೀರೇಂದ್ರ ವಿಜಯ.

ರಾಧಾ - ಹಾಗಾದರೆ ಮೊಕದ್ದಮೆಯನ್ನು ತ್ಯಜಿಸಿಬಿಡುವೆಯಾ ?

ಅರಿಂ—ಹಾಗುಂಟೆ ? ರುಜುವಾತೆಂದರೆ ಎಂತಹುದೋ ತಿಳಿದವರಾರು ? ದೈವವಶಾತ್ ಅದೇ ನಮಗೆ ಸಹಾಯಕವಾಗಬಹುದು. ಅದು ಅವರಿಗೆ ಉಪಯೋಗಕರವಾದಂತೆ ನಮಗೂ ಉಪಯುಕ್ತವಾದುದಿರಬಹುದು. ನಡೆ, ನಾವಿಬ್ಬರೂ ಹೋಗುವ. ಇಂದು ನೀನೆನ್ನೊಡನಿರುವುದು ಅತ್ಯಾವಶ್ಯಕವಾದುದಾಗಿದೆ.

ಅರಿಂದಮನು ಆಹಾರವನ್ನು ಅಂತಹ ಸಮಯಗಳಲ್ಲಿ ತೆಗೆದುಕೊಳ್ಳುವ ಅಭ್ಯಾಸವೇ ಇಲ್ಲ. ತನ್ನ ಕಾರ್ಯಾರ್ಥಿಯಾಗಿ ಹೊರಟಾಗ ಅನ್ನ ನೀರನ್ನುಳಿದು ಕೆಲಸ ಮಾಡುವನು. ಇಂದೂ ಹಾಗೆಯೇ ಹೊರಟನು. ಆನಂದನ ಮನೆಯಲ್ಲಿ ಸ್ವಯಂ ಧೀರೇಂದ್ರಬಾಬುವೇ ಅಧಿಕಾರ ಪ್ರಕಟಣ ಮಾಡುತ್ತ ಕುಳಿತಿದ್ದನು. ಅರಿಂದಮನನ್ನು ಕಂಡೊಡನೆಯೇ “ ಏನು ಬಾಬುಗಳೆ ! ನಾವು ತಪ್ಪು ತಿಳಿದವರೆಂದು ಸ್ಥಿರಪಡಿಸಿದುದಾಯಿತೆ ? ತಮ್ಮ ಚೋರ ಶಿಖಾಮಣಿಯೆಲ್ಲಿರುವನು” ? ಎಂದು ಹಾಸ್ಯಮಾಡಿದನು.

ಅರಿಂ—ಇನ್ನೂ ಯಾವುದನ್ನೂ ನಾನು ನಿರ್ಧರಿಸಲಾಗಲಿಲ್ಲ.

ಧೀರೇಂದ್ರ—ನಾನೇನೋ ನಿರ್ಧರಿಸಿ ಬಹು ಕಾಲವಾಯಿತು. ನಮಗಿದ್ದ ಸಂಶಯವು ದೃಢವಾಗಲು ಸಾಕಾದಷ್ಟು ರುಜುವಾತು ದೊರಕಿದೆ. ಕ್ಷಮಿಸಬೇಕು ಮಹಾಶಯ ! ಈ ಮೊಕದ್ದಮೆಯಲ್ಲಿ ತಮಗಿಂತ ಮೊದಲೇ ಒಂದು ನಿರ್ಧಾರಕ್ಕೆ ಬಂದಂತಾಯಿತು. ತಾವು ಸೋಲನ್ನೊಪ್ಪಿಕೊಳ್ಳಬೇಕಾಗಿದೆ.

ಅರಿಂ—ತಾವು ಹೀಗೆ ಅಪ್ಪಣೆಕೊಡಿಸಲು ಯಾವುದೋ ಬಲವತ್ತರವಾದ ಕಾರಣವೇ ಇರಬೇಕೆಂದು ತೋರುವುದು.

ಧೀರೇಂದ್ರನು ನಗಲಾರಂಭಿಸಿ, "ತಮ್ಮ ಸೋಲನ್ನೊಪ್ಪಿಕೊಳ್ಳಲು ತಮಗೆ ಇಷ್ಟವಿಲ್ಲವೆಂದು ಸ್ಪಷ್ಟವಾಗಿ ಹೇಳಲಾರಿರೆಂದು ತೋರುತ್ತೆ. ಎಲ್ಲರೂ ಹೇಳುವುದನ್ನು ಕೇಳಿಲ್ಲವೆ ಒಬ್ಬೊಬ್ಬರಿಗೆ ಒಂದೊಂದು ಕಾಲ "ಅತ್ತೆಗೊಂದು ಕಾಲ, ಸೊಸೆಗೊಂದು ಕಾಲ" ಯಾವಾಗಲೂ ತಮಗೇ ಜಯಲಾಭವಾಗುವುದೆಂದರೆ ಸಾಧ್ಯವೇ ? ಇಷ್ಟು ದಿನ ತಾವು ಜಯಪತಾಕೆಯನ್ನಾಡಿಸಿದಿರಿ. ಈಗ ಅದನ್ನು ನಾವು ಹಿಡಿಯ ಬೇಕಾಗಿದೆ. ತಮಗೆ ಕೋಪವೇನೂ ಇಲ್ಲವಷ್ಟೆ ?

ಅರಿಂ—ಕೋಪವೇಕೆ ? ಅದಕ್ಕೆ ಪ್ರತಿಯಾಗಿ ಸರಿಯಾದ ಹತ್ಯಾಕಾರಿಯು ದೊರೆತನೆಂದು ಸಂತೋಷವಾಗುವುದು.

ಧೀರೇಂದ್ರ—ಹೀಗೆ ದಯಮಾಡಿಸೋಣಾಗಲಿ. ನಾವು ಕಂಡು ಹಿಡಿದುದನ್ನು ತೋರಿಸಿಕೊಡುತ್ತೇನೆ.

ಇದುವರೆಗೆ ಮನೆಯ ಮಧ್ಯಭಾಗದಲ್ಲಿದ್ದ ದೊಡ್ಡ ಕೊಠಡಿಯಲ್ಲಿ ಎಲ್ಲರೂ ಸೇರಿ ಮಾತನಾಡುತ್ತಿದ್ದರು. ಅಲ್ಲಿಂದ ಎಲ್ಲರೂ ಆನಂದನು ಮಲಗುವ ಕೊಠಡಿಗೆ ಹೋದರು. ಅಲ್ಲಿಂದ ಮನೆಯ ಮುಂಭಾಗದಲ್ಲಿರುವ ಕೊಟಡಿಗೆ ಸಣ್ಣ ಮಾರ್ಗ ವೊಂದಿರುವುದು. ಅಲ್ಲಿ ಎರಡು ಕಡೆಗಳಲ್ಲಿಯೂ ಗೋಡೆಗಳು ಇದ್ದು ಕಿಟಕಿಗಳ ಅಭಾವವಿದ್ದುದರಿಂದ ಅಲ್ಲಿನ ಪದಾರ್ಥಗಳು ಮಸಕು ಮಸಕಾಗಿ ಕಾಣಬರುತ್ತಿದ್ದವು. ಧೀರೇಂದ್ರನು ಅರಿಂದಮನನ್ನೂ ರಾಧಾನಾಥನನ್ನೂ ಈ ಮಾರ್ಗವಾಗಿ ಕರೆದು ಕೊಂಡು ನಡೆದನು. ಮಾರ್ಗ ಮಧ್ಯದಲ್ಲಿ "ನಿಶಾಕಾಂತಬಾಬುವು ಹತ್ಯೆ ಮಾಡಿದ ಬಳಿಕ ಈ ಮಾರ್ಗವಾಗಿ ಬಂದು ಮನೆಯ ಮುಂದೆ ತಾನಿಟ್ಟುಹೋಗಿದ್ದ ರುಮಾ ಲನ್ನು ತೆಗೆದುಕೊಂಡು ಹೋಗಿರುವನು. ಆದರೆ ತನ್ನ ಕೊರಳಿಗೆ ತಾನೇ ಉರಲು ಹಾಕಿಕೊಂಡಿರುವನು. ಇಲ್ಲಿ ನೋಡೋಣಾಗಲಿ" ಎಂದು ಹೇಳುತ್ತ ತಟ್ಟನೆ ಒಂದು ಬೆಂಕಿಯ ಕಡ್ಡಿಯನ್ನು ಹತ್ತಿಸಿ ಗೋಡೆಯ ಕಡೆಗೆ ತೋರಿಸಿದನು. ಅಲ್ಲಿ ಸ್ಪಷ್ಟವಾಗಿ ಕಂಡುಬರುತ್ತಿದ್ದ ಹೆಬ್ಬೆಟ್ಟಿನ ಗುರುತೊಂದು ಕಾಣಿಸಿದುದು. ಗೋಡೆಗೆ ಹೊಸದಾಗಿ ಸುಣ್ಣವನ್ನು ಹಚ್ಚಿದ್ದುದರಿಂದ ರಕ್ತದ ಕಲೆಯಿಂದುಂಟಾಗಿದ್ದ ಹೆಬ್ಬೆಟ್ಟಿನ ಗುರುತು ಸ್ಪಷ್ಟವಾಗಿ ಕಂಡುಬರುತ್ತಿದ್ದಿತು.

ಧೀರೇಂ– ಅದನ್ನು ಈ ಭೂತಗನ್ನಡಿಯಿಂದ ಪರೀಕ್ಷಿಸೋಣಾಗಲಿ

ಅರಿಂ– ಹಾಗೆಯೇ ಮಾಡುತ್ತಿದ್ದೇನೆ.

ಧೀರೇಂ– ಒಬ್ಬರ ಹೆಬ್ಬೆಟ್ಟಿನ ಗುರುತಂತೆ .ಮತ್ತೊಬ್ಬರದು ಇರುವುದಿಲ್ಲವೆಂದು ತಮಗೆ ತಿಳಿದಿರುವುದೋ ?

ಅರಿಂ– ಹಾಗೆಯೇ ಸ್ವಲ್ಪ ಮಟ್ಟಿಗೆ ಕೇಳಿದ್ದೇನೆ.

ಧೀರೇಂ– ಹಾಗಾದರೆ ಮಯಣದ ಮೇಲೆ ಈ ದಿನ ಬೆಳಿಗ್ಗೆ ನನ್ನಪ್ಪಣೇಯಮೇರೆಗೆ ತೆಗೆದಿರುವ ಈ ಗುರುತನ್ನು, ಇಲ್ಲಿ ಗೋಡೆಯ ಮೇಲಿರುವ ಗುರುತನ್ನೂ ಪರಾಮರ್ಶಿಸೋಣಾಗಲಿ. ಪ್ರಾತಃಕಾಲವೇ ಮೊದಲು ನಿಶಾಕಾಂತನ ಬಲಗೈ ಹೆಬ್ಬೆಟ್ಟಿನ ಗುರುತನ್ನು ಈ ಮಯಣದ ಮೇಲೆ ತೆಗೆಯಿಸಿದ್ದೇನೆ. ಈಗ ಏನು ಹೇಳೋಣಾಗುವುದು ?

ಅರಿಂದಮ ರಾಧಾನಾಥರು ಎರಡನ್ನೂ ನೋಡಿದರು. ಎರಡೂ ಒಬ್ಬನದೆಂದೇಹೇಳಲು ಭೂತಗನ್ನಡಿಯ ಸಹಾಯವೇನೂ ಅವಶ್ಯಕವಾಗಿ ತೋರಲಿಲ್ಲ. ನಿಶಾಕಾಂತನನ್ನುಳಿಸುವುದು ಅಶಕ್ಯವಾದುದೆಂದುಕೊಂಡು ರಾಧಾನಾಥನು,'' ಎಲ್ಲವೂ ಮುಗಿಯಿತು '' ಎಂದನು.

ಧೀರೇಂ - ಎಲ್ಲವೂ ಮುಗಿಯಿತು !

ಅರಿಂ - ಎಲ್ಲವೂ ಮುಗಿಯಿತು !

ಅರಿಂದಮನ ಸ್ವರವು ಸ್ವಲ್ಪ ವ್ಯಂಗವಾಗಿ ಕಂಡುಬಂದುದರಿಂದ ಎಲ್ಲರೂ ಅವನ ಮುಖವನ್ನು ನೋಡಿದರು. ಮ್ಲಾನವಾಗಿದ್ದ ಅವನ ಮುಖ ಮಂಡಲವು ತಟ್ಟನೆ ವಿಕಸಿತವಾದ ಕುಸುಮದಂತೆ ಪ್ರಫುಲ್ಲಿತವಾಗಿದ್ದಿತು. ಅವನೆ ತಟ್ಟನೆ ಹಾಸ್ಯವದನನಾದನು. ಇದನ್ನು ನೋಡಿ ಎಲ್ಲರೂ ಆಶ್ಚರ್ಯಾನ್ವಿತರಾದರು. ಅವನು ಗಟ್ಟಿಯಾಗಿ ನಗಬೇಕೆಂದಿಷ್ಟವುಳ್ಳವನಾದರೂ ಉಕ್ಕಿಬರುತ್ತಿದ್ದ ನಗುವನ್ನು ಬಹುಕಷ್ಟದಿಂದ ಸಂಯಮನಮಾಡಿಕೊಳ್ಳುತ್ತಿದ್ದನೆಂದು ರಾಧಾನಾಥನು ಭಾವಿಸಿಕೊಂಡು ಅವನನ್ನೇ ಏಕಾಗ್ರಚಿತ್ತತೆಯಿಂದ ನೋಡುತ್ತಿದ್ದನು.

ಅರಿಂ– ಅಬ್ಬಾ ! ನೋಡಿದಿರಾ ? ಎಂತಹ ಮೋಸಗಾರ? ಇವನ ಸುಟ್ಟ ಮೋರೆಯನ್ನು ನನ್ನಲ್ಲಿಗೆ ತಂದು ನಾನವನನ್ನು ಕಾಪಾಡಬೇಕೆಂದು ಮೊರೆಯಿಟ್ಟನಲ್ಲ ಎಂತಹ ಕೃತ್ರಿಮ ! ಇವನಿಂತಹ ದಗಾಖೋರಾ ಪಾಷಂಡನೆಂದು ಅವನ ಮುಖವನ್ನು ನೋಡಿದ ಮಾತ್ರದಿಂದಲೇ ತಿಳಿಯುವುದೇ ಇದೆಲ್ಲವನ್ನೂ ನೋಡಿದರೆ ಬೆಳ್ಳಗಿರುವುದೆಲ್ಲ ಹಾಲೆಂದು ನಂಬಲಾಗದು. ಹೀಗೆಯೇ ಒಂದೊಂದು ವೇಳೆ ನಾವು ತಿಳಿದಿರುವುದೆಲ್ಲಾ ಸರಿಯೆಂದು ನಿರ್ಧರಿಸಿಕೊಂಡು ಹೇಳುವುದು ಶುದ್ಧ ಮೂರ್ಖತನವೇಸರಿ. ಇಂದು ಒಳ್ಳೆಯ ಪಾಠವನ್ನೇ ತಾವೆನಗೆ ಕಲಿಸಿದಂತಾಯಿತು. ಅಲ್ಲವೇ ಧೀರೇಂದ್ರಬಾಬುಗಳವರೇ !

ಧೀರೇಂ-ಅಹುದಹುದು.. ನಮ್ಮಲ್ಲಿ ಕೆಲವರು ತಮ್ಮದಾರಿಯೇ ಸರಿಯಾಗಿ ದೆಯೆಂದು ಬಹಳ ಮುಸ್ಕರಮಾಡುವರು

ಧೀರೇಂದ್ರನು ಮಾತನಾಡುತ್ತಿದ್ದ ವ್ಯಂಗಮಾತುಗಳಿಗಾಗಿ ರಾಧಾನಾಥನು ಅವನನ್ನು ಅಲ್ಲಿಯೇ ಹೊಡೆದುಬಿಡೋಣವೆಂದು ಯೋಚಿಸುತ್ತಿದ್ದನು. ಅರಿಂದಮನು ಸ್ವಲ್ಪವಾದರೂ ಕೋಪಭಾವವನ್ನು ವ್ಯಕ್ತಪಡಿಸಲಿಲ್ಲ.

ಅರಿಂ- ಈ ತರುಣನು ದೈವವಶಾತ್ ಹೀಗೆ ಇಲ್ಲಿ ತನ್ನ ಗುರುತನ್ನು ಬಿಟ್ಟು ಹೋಗಿದ್ದಾನೆ. ಇಲ್ಲದಿದ್ದರೆ ಗತಿಯೇನು! ನನ್ನ ಒಣ ಮಾತುಗಳನ್ನು ಕೇಳಿ ನಿಮಗೆ ದಿಕ್ಕೇ ತೋರಿದಂತಾಗಿದ್ದಿತು. ರುಮಾಲನ್ನು ತೆಗೆದುಕೊಳ್ಳಲು ಬಂದು ಎಷ್ಟು ಚೆನ್ನಾಗಿ ಹೆಬ್ಬೆಟ್ಟಿನಗುರುತನ್ನೊತ್ತಿದ್ದಾನೆ. ಅಹಾ! ಎಷ್ಟುಸ್ವಾಭಾವಿಕವಾದ ಕಾರ್ಯ!

ಅರಿಂದಮನು ಗಂಭೀರ ಭಾವವನ್ನು ತಾಳುತ್ತಾ, "ಅದಿರಲಿ ಮಹಾಶಯ ಇದು ತಮಗೆ ಮೊದಲು ತಿಳಿದುದು ಹೇಗೆ?" ಎಂದು ಕೇಳಿದನು.

ಧೀರೇಂ- ಮನೆಯಲ್ಲಿ ಕೆಲಸಮಾಡುವ ಮುದುಕಿಯು ಇದನ್ನು ನಮಗೆ ತೋರಿಸಿದಳು.

ಅರಿಂ ಮೊದಲು ಯಾರಿಗೆ ತೋರಿಸಿದಳು ?

ಧೀರೇಂ- ರಾತ್ರಿ ಪಹರೆಕೊಡುವ ಪೋಲೀಸು ಜವಾನನಿಗೆ.

ಅರಿಂ- ಅವನಿದ್ದುದೆಲ್ಲಿ ?

ಧೀರೇಂ- ಅವನು ಆನಂದನು ಮಲಗುತ್ತಿದ್ದ ಕೊಟಡಿಯಲ್ಲಿದ್ದನು ಅಲ್ಲಿ ಯಾವ ಪದಾರ್ಥವನ್ನೇ ಆಗಲಿ ಯಾರೂ ಮುಟ್ಟದಂತೆ ನೋಡಿಕೊಳ್ಳುತ್ತಿದ್ದನು.

ಅರಿಂ- ಇದನ್ನು ನೆನ್ನೆದಿನ ಪೋಲೀಸಿನವರು ನೋಡಿದ್ದರೆ !

ಧೀರೇಂ--- ಇಲ್ಲ

ಅರಿ— ಏಕೆ!

ಧೀರೇಂ— ಈ ಮಾರ್ಗದಲ್ಲಿ ಅಕ್ಕಪಕ್ಕಗಳಲ್ಲಿರುವ ಗೋಡೆಗಳನ್ನು ಅಷ್ಟು ಪರೀಕ್ಷೆಮಾಡಲು ಕಾರಣವೇನೂ ಇರಲಿಲ್ಲ. ಅದಲ್ಲವೆ ತಾವೇ ನೋಡಿರಿ. ಅದು ಅಂತಹ ಪ್ರಾಮುಖ್ಯವಾದ ಸ್ಥಳವೂ ಅಲ್ಲ.

ಅರಿಂ— ನಿಜ, ನಿಜ. ಆ ಸ್ಥಳವನ್ನು ಅಷ್ಟು ಚೆನ್ನಾಗಿ ಪರೀಕ್ಷೆಮಾಡ ಬೇಕೆಂದು ನಮಗಿರುವ ಅಂತಹ ಅಗತ್ಯವಾದರೂ ಏನು ? ಮೊಕದ್ದಮೆಯನ್ನು ಪತ್ತೆ ಮಾಡುವುದೆಂದರೆ ಇಲ್ಲಿ ಅಲ್ಲಿ ಒಂದೆರಡು ಗುರುತುಗಳು ಸಿಕ್ಕೊಡನೆಯೇ ಒಂದು ಇತ್ಯರ್ಥಕ್ಕೆ ಬಂದರಾಯಿತು.

ಧೀರೇಂ— ಏನು ? ತಾವು ಹಾಸ್ಯಮಾಡೋಣಾಗುವುದೊ ?

ಅರಿಂ--ಚಿಃ! ಉಂಟೆ ? ಹಾಸ್ಯವೆಂದರೇನು! ಅದೂ ತಮ್ಮಲ್ಲಿ ಆ ಹೆಬ್ಬೆಟ್ಟಿನ

ಗುರುತು ಖಂಡಿತವಾಗಿಯೂ ನೆನ್ನೆಯದಿನ ಅಲ್ಲಿದ್ದಿತೆಂದು ನಂಬುವಿರಷ್ಟೆ.

ಧೀರೇಂದ್ರನು ಅರಿಂದಮುನನ್ನು ದುರುದುರನೆ ನೋಡತೊಡಗಿದನು ಬಳಿಕ "ಏನು ಮಹಾಶಯರೇ! ಇಂದು ತಮ್ಮ ದೇಹಸ್ಥಿತಿ ಯೇಕೋ ನೆಟ್ಟಗಿಲ್ಲವೆಂದು ತೋರುತ್ತೆ. ನಿಶಾಕಾಂತನು ನಮ್ಮ ಠಾಣೆಯಿಂದ ತಪ್ಪಿಸಿಕೊಂಡು ಬಂದು ಈ ಗುರುತನ್ನು ಮಾಡಿ ತನ್ನ ಕೊರಲಿಗೆ ನೇಣುಹಾಕಿಕೊಳ್ಳಲೆತ್ನಿಸಿದನೆಂದು ತಿಳಿದಿರೋ ಪ್ರಪಂಚದಲ್ಲಿ ಯಾವ ಪತ್ತೇದಾರನಾದರೂ ಪರೀಕ್ಷಿಸಲಿ. ಇದು ನಿಶಾಕಾಂತನ ಹೆಬ್ಬೆಟ್ಟಿನಲ್ಲಿನ ಗುರುತಲ್ಲವೆಂದು ಸಿದ್ಧಾಂತಪಡಿಸಲಿ. ಅಂದೇ ನನ್ನ ಕೆಲಸಕ್ಕೆ ರಾಜೀನಾಮೆಯಿತ್ತೆನೆಂದು ತಿಳಿಯಿರಿ," ಎಂದನು.

ಅರಿಂ— ಇದು ಆತನದೇ ಎಂದು ನಿರ್ಧರವಾಗಿ ಹೇಳಬಲ್ಲೆ.

ಧೀರೇಂ— ಮತ್ತೆ ಸಂಶಯವೇಕೆ? ಇಷ್ಟುಸಾಕು. ಅರಿಂದಮುಬಾಬುಗಳೇ! ನಾನು ಕಂಡುಹಿಡಿದಿರುವ ರುಜುವಾತುಗಳ ಮೇಲೆ ನನ್ನ ಸಿದ್ಧಾಂತಗಳನ್ನು ಮಾಡುತ್ತಿದ್ದೇನೆ. ಎದುರಿಗೆ ಕಣ್ಣಿಗೆ ಕಟ್ಟಿದಂತಿರುವ ಸಂಗತಿಗಳನ್ನು ದೂರಮಾಡಿ ವ್ಯರ್ಥ ಬುದ್ಧಿವ್ಯಯಮಾಡಿ ತಲೆಯನ್ನು ಕೆಡಿಸಿಕೊಳ್ಳುವ ಸ್ವಭಾವವು ನನ್ನದಲ್ಲ. ಮತ್ತೇ ನನ್ನೂ ಈಗ ಹೇಳಲಾರೆ. ಈಗ ಹೊರಟು ನನ್ನ ರಿಪೋರ್ಟನ್ನು ಬರೆಯ ತೊಡಗುತ್ತೇನೆ ತಮಗೆ ಮತ್ತಾವ ಪ್ರಶ್ನೆಗೆ ಉತ್ತರ ಬರಬೇಕಾದರೂ ಆ ಕೊಟಡಿಗೆ ಬನ್ನಿ ಅಲ್ಲಿರುತ್ತೇನೆ. ಹೀಗೆ ಹೇಳುತ್ತಾ ಧೀರೇಂದ್ರನು ಅಲ್ಲಿ ನಿಲ್ಲದೆ ಅರಿಂದಮುನನ್ನೇ ದಿಟ್ಟಿಸಿನೋಡುತ್ತಾ ಹೊರಟುಹೋದನು. ಈ ವೇಳೆಗೆ ಅರಿಂದಮುನು ತನ್ನ ಸ್ವಾಭಾವ ಸಿದ್ಧವಾದ ಗಂಭೀರ ಪ್ರಕೃತಿಯನ್ನು ತಾಳಿದ್ದನು. ಆದರೂ ಅವನ ಮುಖದಲ್ಲಿ ಕಿರುನಗೆಯು ಆಗಾಗ ತಲೆದೋರುತ್ತಿದ್ದಿತೆಂದು ಯಾವನಾದರೂ ಸುಲಭವಾಗಿ ಕಂಡು ಹಿಡಿಯಬಹುದಾಗಿದ್ದಿತು. ಅವನು ರಾಧಾನಾಥನನ್ನು ನೋಡಿ, "ನೋಡು ಮಿತ್ರ ಇದೆಲ್ಲವನ್ನೂ ನೋಡಿ ಸ್ವಲ್ಪ ದುಃಖವಾಗುವುದಿಲ್ಲವೇ? ಆದರೂ ನಮ್ಮ ನಿಶಾಕಾಂತನಿಗೆ ಸ್ವಲ್ಪ ಉಳಿಗಾಲ ವಿದೆಯೆಂದೇನೋ ತೋರುತ್ತದೆ" ಎಂದನು.

ರಾಧಾ— ಹಾಗಾದರೆ ಬಹಳ ಸಂತೋಷ. ಅವನಿಗೆ ಕೊನೆಗಾಲವೇ ಪ್ರಾಪ್ತವಾಯಿತೆಂದನು.

ಅರಿಂ— ನಾನಿನ್ನೂ ನಿರಾಶಾಪರವಶನಾಗಿಲ್ಲ. ಧೀರೇಂದ್ರನು ಕಂಡುಹಿಡಿರುವ ರುಜುವಾತಿನಲ್ಲಿ ಒಂದೇ ಒಂದು ಕುಂದುಬರುತ್ತಿದೆ. ಅದರಿಂದ ಆ ಗುರುತನ್ನು ನೋಡಿದ ಮೊದಲು ನನಗೆ ಸ್ವಲ್ಪ ಸಮಾಧಾನವೆನಿಸಿದೆ.

ರಾಧಾ— ಅದೇನು ಅಂತಹ ಕುಂದಿರುವುದು?

ಅರಿಂ— ನೆನ್ನೆಯ ದಿನ ನಾನು ಹರಪುರಗ್ರಾಮದಿಂದ ಇಲ್ಲಿಗೆ ಬಂದು ಇಲ್ಲಿ ಎಲ್ಲವನ್ನೂ ಪರೀಕ್ಷಿಸಿದೆನಷ್ಟೆ.

ರಾಧಾ— ನಿಜ ಅದೆಲ್ಲವನ್ನೂ ನೀನೇ ಹೇಳಿರುವೆ.

ಅರಿಂ— ಆಗ ಈ ಗೋಡೆಗಳನ್ನು ಈ ಮಾರ್ಗವನ್ನೂ ಚೆನ್ನಾಗಿ ಪರೀಕ್ಷೆ ಮಾಡಿದ್ದೇನೆ.

ರಾಧಾ— ಈಗ ವ್ಯತ್ಯಾಸವೇನಾದರೂ ಕಂಡು ಬರುವುದೇ ?

ಅರಿಂ— ಕಂಡುಬಂದಿದೆ. ಆಗ ಈ ಗುರುತು ಅಲ್ಲಿರಲೇಇಲ್ಲ.

ರಾಧಾ— ಏನೂ ಇರಲೇಇಲ್ಲವೇ ?

ಅರಿಂ— ಇಲ್ಲ.

ರಾಧಾ— ನಿಜವಾಗಿಯೂ?

ಅರಿಂ— ನಿಜವಾಗಿ.

ರಾಧಾ— ಅದು ಹೇಗೆ ಸಾಧ್ಯ ? ನಿಶಾಕಾಂತನು ಸೆರೆಯಲ್ಲಿರುವನು. ಅವನ ಗುರುತು ನೆನ್ನೆಯದಿನ ಇಲ್ಲದಿದ್ದುದು ಇಂದು ಕಾಣಿಸಿ ಕೊಂಡುದು ಹೇಗೆ ?

ಅರಿಂ— ಅದನ್ನೇ ಯೋಚಿಸುತ್ತಿದ್ದೇನೆ. ಇಷ್ಟರಲ್ಲಿಯೇ ನಿನಗೂ ತಿಳಿಯ ಪಡಿಸುತ್ತೇನೆ.

ರಾಧಾ— ನಿಶಾಕಾಂತನಿಗೆ ಅವಳಿಯಾಗಿ ಹುಟ್ಟಿದ ಸಹೋದರನಿರಬಹುದು

ಅರಿಂ— ನನಗೆ ತಿಳಿದ ಮಟ್ಟಿಗೆ ಯಾರೂ ಇಲ್ಲ. ಹಾಗಿದ್ದರೂ ಯಾರಿಗೂ ತಿಳಿಯದಂತೆ ಅವನು ಇಲ್ಲಿಗೆ ಬಂದು ಹೋಗುವುದು ಅಸಂಭವ. ಇಲ್ಲಿಯೇ ನಮ್ಮ ಹೆಡ್ ಕಾನಸ್ಟೇಬಲನು ದರ್ಪದಿಂದ ಅಧಿಕಾರ ನಡೆಸುತ್ತಿದ್ದಾನೆ. ಅವನಿಗೆ ಕಾಣ ದಂತೆ ಬಂದು ಹೋಗುವುದು ಸ್ವಲ್ಪ ದುಸ್ತರವಲ್ಲವೇ ? ಒಂದುವೇಳೆ ಹಾಗೆ ಅವನ ಸಹೋದರನಿದ್ದರೆ ನಿಶಾಕಾಂತನಿಂದಲೂ ಅವನ ತಾಯಿಯಿಂದಲೂ ಈವೇಳೆಗೆ ವಿಷಯವು ಹೊರಪಡುತ್ತಿದ್ದಿತು.

ರಾಧಾ— ಮೊದಲು ನೋಡಿದವಳು ಆ ಮುದುಕಿ ಅವಳ ಮೇಲೇನಾದರೂ ಸಂದೇಹವಿದೆಯೇ ?

ಅರಿಂ— ಅವಳ ಮೇಲೆ ಮೊದಲಿಂದಲೂ ಗುಮಾನಿಪಟ್ಟಿದ್ದೇನೆ. ಅವಳು ಯಾವನಿಗೋ ಸಹಾಯಕಳಾಗಿದ್ದಾಳೆ. ನನಗೊಂದು ಯೋಚನೆಯು ತೋರುತ್ತದೆ ಮೊಕದ್ದಮೆಯ ಪತ್ತೆಯು ಸ್ವಲ್ಪ ಸುಲಭವಾಗುತ್ತಿರುವಂತೆ ಕಾಣುತ್ತದೆ. ಈಗ ಬಾ ಈ ಮನೆಯನ್ನು ಮತ್ತೊಂದು ಬಾರಿ ನೋಡಿಕೊಂಡು ಬರೋಣ

ಇಬ್ಬರೂ ಅಲ್ಲಿಂದ ಹೊರಟು ಮನೆಯ ಹೊರಗಿದ್ದ ತೋಟದ ಕಡೆಗೆ ಹೋದರು. ಮನೆಯ ಸುತ್ತಲೂ ನೋಡಿಕೊಂಡು ಹೊರಟರು. ಅರಿಂದಮನು ಮನೆಯ ನಾಲ್ಕು ಕಡೆಗಳಲ್ಲಿ ಪರೀಕ್ಷೆಮಾಡುತ್ತಿದ್ದನು. ಬಳಿಕ ಮನೆಯೊಳಗೆ ಹೊರಟು ಅದರ ಪ್ರತಿಯೊಂದು ಭಾಗವನ್ನೂ ಶೋಧಿಸಿದನು.

ಅನೇಕ ಕೊಟಡಿಗಳಲ್ಲಿ ಯಾವ ಪದಾರ್ಥವೂ ಇರಲಿಲ್ಲವಾದರೂ ಅವುಗಳೆಲ್ಲ ವನ್ನೂ ಪರಿಶೋಧಿಸತೊಡಗಿದನು. ಕಡೆಗೆ ಮಧ್ಯಭಾಗದಲ್ಲಿದ್ದ ಕೊಟಡಿಯಿಂದ

ಮಹಡಿಯ ಮೇಲೆ ಹತ್ತಿಹೋದನು. ಅಲ್ಲಿ ಎರಡು ಮೂರು ಕೊಟಡಿಗಳಲ್ಲಿ ಯಾರೂ ಇದ್ದ ಸುಳಿವೇ ಕಂಡುಬರಲಿಲ್ಲ. ಅಲ್ಲಿಂದ ಸ್ವಲ್ಪ ಮುಂದೆ ಹೋಗಿ ಅರಿಂದಮನು ಅದೇನನ್ನೋ ನೋಡಿ ಸ್ವಲ್ಪ ನಗುಮುಖನಾಗಿ, " ರಾಧಾನಾಥ! ಈ ಮೊಕದ್ದಮೆಯಲ್ಲಿ ಬಹಳ ಆಶ್ಚರ್ಯಕರವಾದ ಸಂಗತಿಯೇ ಒಂದರಮೇಲೊಂದು ತಿಳಿಯುತ್ತದೆ. ಈಗ ಬಾ ಕೆಳಗಿಳಿದು ಹೋಗಿ ನಮ್ಮ ಪತ್ತೇದಾರ ಪ್ರಭುವನ್ನು ಸ್ವಲ್ಪ ವಿಚಾರಿಸೋಣ ನಾನು ಯೋಚಿಸಿರುವುದು ಸರಿಯಾಗಿದ್ದರೆ— ಸರಿ, ಸರಿ, ನೀನೇ ಮುಂದೆ ತಿಳಿಯುವೆ. ಈಗ ಬಾ " ಎನ್ನುತ್ತಾ ಮಹಡಿಯಿಂದ ಕೆಳಗಿಳಿದು ಹೋದನು.

---

## ಅಷ್ಟಮ ಪರಿಚ್ಛೇದ

ಪತ್ತೇದಾರ್ ಧೀರೇಂದ್ರಬಾಬುವು ಆ ಮನೆಯ ಕೆಳಭಾಗದಲ್ಲಿದ್ದ ಕೊಟಡಿಯೊಂದರಲ್ಲಿ ಕುಳಿತು ತನ್ನ ಸಾಹಸ ವಿವರ ( ರಿಪೋರ್ಟ್ ) ವನ್ನು ಬರೆಯುತ್ತಿದ್ದನು. ಅರಿಂದಮನು ಬಂದು, ' ರಿಪೋರ್ಟನ್ನು ಬರೆಯೋಣಾಗುತ್ತಿದೆಯೇ ?' ಎಂದನು.

ಧೀರೇಂ-- ಅಹುದು

ಅರಿಂ— ತಮ್ಮ ರುಜುವಾತುಗಳು ಮತ್ತು ತಪ್ಪಿತವನ್ನು ಸ್ಥಿರಪಡಿಸುವ ಆಧಾರಗಳು ಪೂರ್ತಿಯಾಗೆಲ್ಲವೂ ದೊರತಿವೆಯೇ?

ಧೀರೇಂ- ಇದೇನು ತಾವು ಹೊಸಪರಿಫವಾಗಿ ಮಾತನಾಡುತ್ತಿರುವಿರಲ್ಲಾ.

ಅರಿಂ— ತಮ್ಮ ಸಂಧಾನವು ಇನ್ನೂ ಪೂರ್ತಿಯಾಗಿಲ್ಲ.

ಧೀರೇಂದ್ರನು ಅರಿಂದಮನನ್ನು ಚೆನ್ನಾಗಿ ಬಲ್ಲವನಾಗಿದ್ದನು. ಅವನು ಇಂದು ಬಲವಾಗಿ ಯೋಚಿಸಿ ಅರಿಂದಮನು ಹುಚ್ಚನಂತಾಗಿರಬೇಕೆಂದು ಇಲ್ಲದಿದ್ದರೆ ಯಾವುದೋ ಬಲವತ್ತರವಾದ ಕಾರಣದಿಂದ ಹಾಗೆ ಮಾತನಾಡುತ್ತಿರಬೇಕೆಂದೂ, ಹಾಗಿಲ್ಲದಿದ್ದರೆ ಇಂದು ಇಂತಹ ಅಪೂರ್ವ ವರ್ತನೆಗೆ ಕಾರಣವಿಲ್ಲವೆಂದೂ ಭಾವಿಸಿಕೊಂಡನು. ಅವನು ತನ್ನ ಅಧಿಕಾರದ ಮೇಲೆ ಬಹಳ ಆಶೆ ಕೆಟ್ಟ ಹೆಸರು ಬರಬಾರದೆಂಬ ಇಷ್ಟ ಅದರ ಮೇಲೆ ತಾನು ಬರೆಯುತ್ತಿದ್ದದನ್ನು ನಿಲ್ಲಿಸಿ, ತಾವು ಹೇಳುವುದೇನು ನನಗೆ ತಿಳಿಯುವುದೇ ಇಲ್ಲವೆಂದು ಹೇಳಿದನು.

ಅರಿಂ— ಈ ಮೊಕದ್ದಮೆಯಲ್ಲಿ ಅವಶ್ಯಕವಾಗಿಬೆಕಾಗಿರುವ ಸಾಕ್ಷಿಯೊಬ್ಬನಿದ್ದಾನೆ ಅವನನ್ನು ನೀವು ನೋಡಿಲ್ಲ

ಧೀರೇಂ— ಸಾಕ್ಷಿಯೇ ?

ಅರಿಂ— ಅಹುದು ಸಾಕ್ಷಿ ಬಹು ಮುಖ್ಯನಾದವನು.

ಧೀರೇಂ---ಅವನೆಲ್ಲಿದ್ದಾನೆ ?

ಅರಿಂ-- ಕರತರಬೇಕಾಗಿವೆ ?

ಧೀರೇಂ— ಎಲ್ಲಿಂದ ಕರೆತರಬೇಕು

ಅರಿಂ— ತಾವು ಸ್ವಲ್ಪ ಸಹಾಯಮಾಡಿದರೆ....

ಧೀರೇಂ— ಮಾಡಿದರೆ, ಕರತರಬಲ್ಲಿರಾ ?

ಅರಿಂ— ಪ್ರಯತ್ನಪಟ್ಟು ನೋಡುವೆನು. ಖಂಡಿತವಾಗಿ ಹೇಳಲಾರೆನು ಅದಿರಲಿ ತಮ್ಮ ಬಳಿ ಪೋಲೀಸಿನವರೆಷ್ಟು ಮಂದಿ ಇದ್ದಾರ ?

ಧೀರೇಂ— ಇಲ್ಲಿ ಮೂರುಮಂದಿ ಇದಾರೆ.

ಅರಿಂ— ಬಲಿಷ್ಠರಾದವರೇ.

ಧೀರೇಂ— ಬಲಿಷ್ಠರು

ಅರಿಂ-- ಅಂದರೆ ಗಟ್ಟಿಯಾಗಿ ಕೂಗಬಲ್ಲವರೇ ?

ಧೀರೇಂ— ಇದೇನು ತಮಗೆ ಹುಚ್ಚೋ? ಪರಿಹಾಸ್ಯವೋ ? ಗಟ್ಟಿಯಾಗಿ ಕೂಗ ಬಲ್ಲವರೇ ಎಂದು ಕೇಳಿದರೇಕೆ ?

ಅರಿಂ-- ಅದು ಇಷ್ಟರಲ್ಲಿಯೇ ತಿಳಿಯುವುದು ಕೂಗಲು ಶಕ್ತಿಯುಳ್ಳವರ ಹೇಳೋಣಾಗಲಿ.

ಧೀರೇಂ— ಈ ಮನೆಯುಬಿದ್ದು ಹೋಗುವಂತೆ ಬೇಕಾದರೂ ಕೂಗಿಕೊಳ್ಳ ಬಲ್ಲರು.

ಅರಿಂ-— ಅಷ್ಟಾದರೆ ಸಾಕು. ಅವರನ್ನು ಕರೆಯೋಣಾಗಲಿ. ಸ್ವಲ್ಪಪ್ರಯತ್ನ ಮಾಡೋಣ.

ಐದು ನಿಮಿಷಗಳಾಗುವಷ್ಟರಲ್ಲಿ ಮೂರು ಮಂದಿ ಪೋಲೀಸಿನವರು ಮಧ್ಯ ಇದ್ದ ದೊಡ್ಡ ಕೊಟಡಿಯಲ್ಲಿ ಸೇರಿದರು. ಅರಿಂದಮನು ಅವರನ್ನು ನೋಡಿ, “ಈ ಮನೆಯ ಹಿಂಭಾಗದಲ್ಲಿ ಸ್ವಲ್ಪ ಒಣ ಹುಲ್ಲು ಇದ್ದಂತಿದೆ. ಅದನ್ನು ಎರಡು ಕಟ್ಟುಗಳಾಗಿ ಕಟ್ಟಿತಗೆದುಕೊಂಡು ಬನ್ನಿ ನಮ್ಮ ಸಾಕ್ಷಿಯನ್ನು ಕರೆಸಲು ಬಲು ಮುಖ್ಯವಾದ ಸಾಧನಗಳು —ಸರಿ, ಇಲ್ಲ ಒಬ್ಬಹೇಳೋಣಾಗಲಿ ಎಂದುಹೇಳುತ್ತಾ ಅವರು ತಂದ ಹುಲ್ಲಿನಕಟ್ಟುಗಳನ್ನು ತೆಗೆದುಕೊಂಡು ಮಹಡಿಯ ಮೇಲೆ ಹೋದನು. ಮೊದಲು ನೋಡಿದ್ದ ಮೂರುಕೊಟಡಿಗಳನ್ನು ಬಿಟ್ಟು ಸ್ವಲ್ಪ ಮುಂದೆ ಹೋಗಿ ಅಲ್ಲಿ ಹುಲ್ಲನಿಡು ವಂತೆಹೇಳಿದನು. ಕೊಟಡಿಗಳ ಮುಂಭಾಗದಲ್ಲಿ ವಿಶಾಲವಾಗಿದ್ದ ಪ್ರದೇಶ ವೊಂದಿದ್ದಿತು. ಆ ಪ್ರದೇಶದ ಒಂದ ಕೊನೆಯಲ್ಲಿ ಅರಿಂದಮನೂ ರಾಧಾನಾಥನೂ ಇತರರು ನಿಂತುಕೊಂಡರು. ಧೀರೇಂದ್ರನು ಆಶ್ಚರ್ಯಾನ್ವಿತನಾಗಿ ಇದೆಲ್ಲವನ್ನೂ ನೋಡುತ್ತಿದ್ದನು ಪೋಲೀಸಿನವರು ತಮ್ಮತಮ್ಮೊಳಗೇ ಮಾತನಾಡಿಕೊಂಡು ನಗುತ್ತಿದ್ದರು. ಎಲ್ಲರೂ ಅರಿಂದಮನಿಗೆ ಪೈತ್ಯವುಂಟಾಯಿತೆಂದು ಭಾವಿಸಿಕೊಂಡರು ಅವನು ಇವರಲ್ಲರ

ಮುಂದೆ ನಿಂತು ತನ್ನ ಕೌಶಲವನ್ನು ಪ್ರಕಾಶಪಡಿಸುವ ಹಾವಾಡಿಗನಂತೆ ಪ್ರಕಾಶಿಸುತ್ತಿದ್ದನು. ಹುಲ್ಲನ್ನು ಆ ಪ್ರದೇಶದಲ್ಲಿಟ್ಟ ಮೇಲೆ ಅರಿಂದಮನು, "ಧೀರೇಂದ್ರ ಬಾಬುಗಳೇ! ನಿಮ್ಮ ಪೋಲೀಸಿನವರನ್ನು ಕಳುಹಿಸಿ ಎರಡು ದೊಡ್ಡಪಾತ್ರೆಗಳಲ್ಲಿ ನೀರು ತರಿಸೋಣಾಗಲಿ ರಾಧಾನಾಥ ನಿನ್ನಲ್ಲಿ ಬೆಂಕಿಕಡ್ಡಿಯಿದೆಯಷ್ಟೆ ಹುಲ್ಲನ್ನು ಸ್ವಲ್ಪ ಈ ಕಡೆಗೆ ತೆಗೆದುಕೊಂಡು ಬನ್ನಿ ಗೋಡೆಗೆ ತಗಲದಿರಬಾರದು" ಎಂದನು.

ಧೀರೇಂ-- ಇದೇನು ತಮಗೆ ಹುಚ್ಚು ಹಿಡಿದಂತಿದೆ.

ಅರಿಂ ತಾವು ಹೇಗೆ ಭಾವಿಸಿದರೂ ಸರಿಯೆ. ನೀರು ತರಿಸೋಣಾಯಿತೆ.

ಧೀರೇಂದ್ರ--ಪುನಃ ಅಪ್ಪಣೆಯಂತೆ ನೀರು ತಂದದ್ದಾಯಿತು. ಅವನು ಕೋಪಾತಿಶಯದಿಂದ ಉರಿದು ಬೀಳುತ್ತಿದ್ದನು. ಕಡೆಗೆ "ಮಹಾಶಯ! ತಾವು ಪರಿಹಾಸ್ಯಕ್ಕಾಗಿ ಹೀಗೆ ಮಾಡುವಂತಿದೆ. ಅದಕ್ಕೀಗ ತಕ್ಕ ಸಮಯವಲ್ಲ. ನಾವು ಕಾರ್ಯಗೌರವವುಳ್ಳವರು. ತಮಗೆ ತಿಳಿದುದೇನಾದರೂ ಇದ್ದರೆ ಇಷ್ಟು ಅವಸ್ಥೆಗೆ ಅವಕಾಶ ಕೊಡದೇ ಹೇಳಬಹುದು" ಎಂದನು.

ಅರಿಂ— ಕ್ಷಮಿಸೋಣಾಗಲಿ. ತಾವು ಅಷ್ಟು ಅವಸರಪಡಲಾಗದು, ನಾನು ಏನುಮಾಡಿದರೂ ಬಲವತ್ತರವಾದ ಕಾರಣವಿಲ್ಲದೇ ಮಾಡನೆಂದು ತಾವಿನ್ನೂ ತಿಳಿಯದಿರುವುದು ಸೋಜಿಗವಾಗಿದೆ ಈಗ ಸ್ವಲ್ಪ ಹೊತ್ತಿಗೆ ಮುಂಚೆ ನಮ್ಮನ್ನು ಹಾಸ್ಯಮಾಡಿದುದನ್ನು ಇನ್ನೂ ಮರೆಯಲಾಗಲಿಲ್ಲ. ಆದುದರಿಂದ ನಾನು ಕೇಳುವುದು ತಮಗೆ ಸ್ವಲ್ಪ ಕಷ್ಟಕರವಾಗಿ ತೋರಿಬರುವುದಾದರೂ ಸ್ವಲ್ಪ ಸಿಧಾಸಿಸೋಣಾಗಲಿ ಎಲ್ಲಿ"--ಎಲ್ಲರೂ ಹೀಗೆ ನಿಲ್ಲಿ. ರಾಧಾನಾಥಬಾಬು? ಆ ಕಟಕಿಯನ್ನು ತೆರೆಯೋಣಾಗಲಿ— ಸಾಕು. ಈಗ ಆ ಹುಲ್ಲಿಗೆ ಬೆಂಕಿಹಚ್ಚಿಬಿಡಿ.

ರಾಧಾನಾಥನು ಹಾಗೆಯೇ ಮಾಡಿದನು. ಸ್ವಲ್ಪ ಹೊತ್ತಿನಲ್ಲಿಯೇ ಹೊಗೆಯು ಅಲ್ಲಿ ಸುತ್ತಿಕೊಳ್ಳಲಾರಂಭಿಸಿತು ಹುಲ್ಲು ಪಟಪಟನೆ ಶಬ್ದ ಮಾಡುತ್ತಾ ಹತ್ತಿಕೊಂಡು ಉರಿಯಲಾರಂಭಿಸಿತು. ಅರಿಂದಮನು "ಈಗ ಸಾಕ್ಷಿಯನ್ನು ಕರೆತರಲಾಗುವುದೇ ನೋಡಬೇಕು. ಎಲ್ಲರೂ ಒಟ್ಟಿಗೆ ಸೇರಿ ಬೆಂಕಿ ಬೆಂಕಿ ಎಂದು ಕೂಗಿರಿ.--ಒಂದು ಎರಡು ಮೂರು- ಎಂದು ಹೇಳುತ್ತಿದ್ದಂತೆಯೇ ಎಲ್ಲರೂ ಒಟ್ಟಿಗೆ ಬೆಂಕಿ ಬೆಂಕಿ ಎಂದು ಕೂಗಿಕೊಂಡರು.

ಅರಿಂ— ಪುನಃ ಕೂಗೋಣಾಗಲಿ

ಎಲ್ಲರೂ- ಬೆಂಕಿ ಬೆಂಕಿ

ಅರಿಂ— ಕಡೆಯಬಾರಿ ಗಟ್ಟಿಯಾಗಿ ಕೂಗುವುದಾಗಲಿ.

ಎಲ್ಲರೂ ಗಟ್ಟಿಯಾಗಿ ಒಂದೇ ಬಾರಿ ಕೂಗಿದರು. ಆ ಧ್ವನಿಯು ಶಾಂತವಾಗುವಷ್ಟರಲ್ಲಿ ಅತ್ಯಾಶ್ಚರ್ಯವಾದ ಸಂಗತಿಯೊಂದುನಡೆಯಿತು. ಆ ಮೂರು ಕೊಟಡಿಗಳಿಂದ ಮುಂದಿದ್ದ ಸ್ವಲ್ಪ ಭಾಗವು ಪಟ ಪಟನೆ ಶಬ್ದಮಾಡಿಕೊಂಡು ತಾನೇತಾನಾಗಿ

ತೆರೆಯಲ್ಪಟ್ಟಿತು. ತಟ್ಟನೆ ಮುದುಕನೊಬ್ಬನು ಆ ಪ್ರದೇಶದಿಂದ ಹೊರಗೆಬಂದನು. ಇಲಿಯೊಂದು ತಟ್ಟನೆ ತನ್ನ ಬಿಲದಿಂದ ಹೊರಬಿದ್ದಂತಾಯಿತು. ಅರಿಂದಮನು "ಭಲೆ! ಚನ್ನಾಗಿ ಫಲಿಸಿತು. ಇನ್ನು ಉರಿಯನ್ನು ನೀರು ಹೊಯಿದು ಆರಿಸೋಣಾಗಲಿ. ಧೀರೇಂದ್ರ ಬಾಬುಗಳೆ! ನೋಡಿರಿ, ಇವರೇ ತಮ್ಮ ಮುಖ್ಯ ಸಾಕ್ಷಿ- ಇಷ್ಟುದಿನ ಕಾಣಿಸಿಕೊಳ್ಳಲಿಲ್ಲ. ಈಗ ಕರೆದೊಡನೆ ಬಂದಿರುವನು. ತಮ್ಮ ಮೊಕದ್ದಮೆಯ ಪ್ರಧಾನಪಾತ್ರರು—ಸದಾ ಆನಂಡವನ್ನು ಬಯಸುವ ಆನಂದಮಹಾಶಯರು ಇವರೇ" ಎಂದನು.

---

# ನವಮ ಪರಿಚ್ಛೇದ.

ಹೀಗೆ ಬಿಲದಿಂದ ಹೊರಬಿದ್ದ ಮುದುಕನೇ ನಮ್ಮ ಆನಂದನು. ಅವನನ್ನು ನೋಡಿದರೆ ಕ್ರೂರಿಯಂತೆಯೂ, ಕಪಟಿಯಂತೆಯೂ ಪ್ರಕಟವಾಗುತ್ತಿದ್ದಿತು. ಅವನ ಕಣ್ಣುಗಳಿಂದ ಅವನು ದುಷ್ಟಸ್ವಭಾವವು ವಿಶದವಾಗುತ್ತಿದ್ದಿತು. ಅವನ ಕೂದಲು ನರೆತು ಹೋಗಿ ಇಂತಹ ದುಷ್ಕೃತ್ಯಗಳಲ್ಲಿ ಮುದುಕನಿಗೆ ಹೆಚ್ಚು ಅನುಭವವಿದ್ದಂತೆ ಪ್ರಕಾಶವಾಗುತ್ತಿತ್ತು. ಧೀರೇಂದ್ರನು ಆಶ್ಚರ್ಯ, ಕೋಪಗಳಿಂದ ಅವನನ್ನು ದುರುದುರನೆ ನೋಡುತ್ತಿದ್ದನು. ಆನಂದನು ಸ್ವಲ್ಪ ಹಾಸ್ಯದಿಂದಲೂ, ಸ್ವಲ್ಪ ಭಯದಿಂದಲೂ ಎಲ್ಲರನ್ನೂ ನೋಡತೊಡಗಿದನು ಅಲ್ಲಿದ್ದ ಪ್ರಕಾಶಮಾನವಾದ ಬೆಳಕು ಅವನ ಕಣ್ಣು ಚುಚ್ಚುತ್ತಿದ್ದಿತು. ಅಲ್ಲಿದ್ದ ಜನರನ್ನೂ ಆಗತಾನೆ ಆರಿಸಲ್ಪಡುತ್ತಿದ್ದ ಬೆಂಕಿಯನ್ನೂ ನೋಡಿ ಆಶ್ಚರ್ಯಚಕಿತನಾಗುತ್ತಿದ್ದನು. ಧೀರೇಂದ್ರನ ಮುಖವನ್ನು ನೋಡಿ ಸ್ವಲ್ಪ ಗಾಬರಿಗೊಂಡವನಾಗಿ "ನಾನು ಕೆಟ್ಟುದಾವುದನ್ನೂ ಮಾಡಿಲ್ಲ" ಎಂದು ಹೇಳಿದನು.

ಧೀರೇಂ-- ಕೆಟ್ಟುದಾವುದೂ ಮಾಡಿಲ್ಲವೆ! ನರಪಿಶಾಚಿ! ನಿರ್ದೋಷಿಯನ್ನು ಕೊಲ್ಲಲು ಎಷ್ಟು ಸಂಧಾನಮಾಡಿರುವೆ? ಈ ಮಹಾತ್ಮ ನಿಲ್ಲದಿದ್ದರೆ ನನ್ನ ಅವಮಾನಕ್ಕೆ ಕಾರಣವಾಗುತ್ತಿದ್ದಿತಲ್ಲದೇ ಅನ್ಯಾಯವಾಗಿ ನಿರ್ದೋಷಿಯಾದವನೊಬ್ಬನು ಗಲ್ಲಿಗೇರಿಸಲ್ಪಡುತ್ತಿದ್ದನು. ಈತನಿಲ್ಲದಿದ್ದರೆ ಖಂಡಿತವಾಗಿ ನಿನ್ನ ಮಾಯಾಜಾಲವು ಭೇದಿಸಲ್ಪಡುತ್ತಿರಲಿಲ್ಲ. ಈಗ ನಡೆ. ಮೊದಲು ನಿನ್ನನ್ನು ಗಲ್ಲಿಗೇರಿಸುವೆನು.

ಆನಂದನು ಒಂದುಬಾರಿ ಅರಿಂದಮನನ್ನು ನೋಡಿ ಕಟಕಟನೆ ಹಲ್ಲುಕಡಿದು ಬಳಿಕ ಸ್ವಲ್ಪ ನಗುತ್ತಾ "ಇವೆಲ್ಲವೂ ಸ್ವಲ್ಪ ವಿನೋದಮಾಡೋಣವೆಂದು ಮಾಡಿದುದು ಅಷ್ಟೆ" ಎಂದನು.

ಧೀರೇಂದ್ರ-- ವಿನೋದವೇ ? ವಿನೋದ ! ನಿನ್ನ ವಿನೋದವು ಹಾಳಾಗಿ ಹೋಗಲಿ. ನಿನ್ನ ಸುಟ್ಟ ಮೋರೆಗೆ ವಿನೋದ ಬೇರೆ ಏನು ನಿನಗೆ ಕೇಡುಗಾಲ ಬಂದಿವೆ ? ಹಿಡಿಯಿರಿ ಇವನನ್ನು ಕೆಳಗೆ ಕರೆದುಕೊಂಡು ಹೋಗಿ ನಾನು ಬರುವ ವರೆಗೆ ಅಲ್ಲಿಯೇ ಇರಿ

ಪೋಲೀಸಿನವರು ಆನಂವನನ್ನು ಹಿಡಿದುಕೊಂಡು ಹೊರಟುಹೋದರು. ಬಳಿಕ ಧೀರೇಂದ್ರನು ಅರಿಂದಮನನ್ನು ನೋಡಿ, ಮಹಾಶಯ ನನ್ನ ಅನುಚರರ ಮುಂವೆ ಹೇಳಲು ಸ್ವಲ್ಪ ಲಜ್ಜೆಯಾಯಿತು. ಈಗ ಹೇಳುವೆನು ಇಂತಹ ಪರಮಾಶ್ಚರ್ಯಕರವಾದ ಸಂಗತಿಯನ್ನು ಭೇದಿಸಿಬಿಟ್ಟಿರಿ. ಹತ್ಯವೇ ನಡೆದಿಲ್ಲ. ಅದು ಹೇಗೆ ಕಂಡುಹಿಡಿದಿರೋ ನನ್ನ ಬುದ್ಧಿಗೆ ತೋರದಂತಾಗಿದೆ. ನಿರ್ದೋಷಿಯೊಬ್ಬನನ್ನು ಕಾಪಾಡೋಣಾಯಿತು. ನನ್ನ ತಲೆ ಎತ್ತಿ ತಿರುಗುವುದೆನಗೆ ಅಸಾಧ್ಯವಾಗುತ್ತಿದ್ದಿತು. ಪೋಲೀಸು ಪ್ರಪಂಚದಲ್ಲಿ ನನ್ನ ಪ್ರಶಸ್ತಿಯನ್ನು ಉಳಿಸೋಣಾಯಿತು. ಎಂದು ವಿನಯವಾಗಿ ಹೇಳಿಕೊಂಡನು

ಅರಿಂದಮನು ಅವನ ಬೆನ್ನು ತಟ್ಟಿ " ಉಳಿಸುವುದು ಮಾತ್ರವೇಇಲ್ಲ. ಅದನ್ನು ಶತಾಂಶವಾಗಿ ವೃದ್ಧಿಯಾಗುವಂತೆ ಮಾಡುತ್ತೇನೆ " ಎಂದನು.

ಧೀರೇಂ— ಅಂದರೆ ಹೇಗೆ ತಮ್ಮ ಹೆಸರನ್ನು ಪ್ರಕಾಶಪಡಿಸುವುದೇ ಇಲ್ಲವೇ?

ಅರಿಂ--ಪಡಿಸಬೇಕಾದ ಪ್ರಮೇಯವೇಇಲ್ಲ. ಇದುವರೆಗೆ ಯಾರ ಹೆಸರು ಮುಂದೆ ಬಂದಿದೆಯೋ ಅವರ ನಾಮಧೇಯವೇ ಪುನಃ ಬರಲಿ. ನನ್ನ ಚರಿತ್ರೆಯನ್ನೆಲ್ಲಾ ತಿಳಿದಿರುವ ಈ ನಾಥಾನಾಥನು ಒಂದಾನೊಂದು ದಿನ ನನ್ನ ಆಖ್ಯಾಯಿಕೆಗಳನ್ನು ಬರೆದಿಡಬಹುದು ಅಥವಾ ಮತ್ತಾವನಾದರೂ ಬರೆಯಬಹುದು. ಈಗ ನನ್ನ ಹೆಸರನ್ನಾದರೂ ಹೇಳಕೂಡದು. ಕರ್ಮಣ್ಯೇವಾಧಿಕಾರಸ್ತೆ ಮಾಫಲೇಷು ಕದಾಚನಾ" ಎಂದು ಕೇಳಿರುವಿರಷ್ಟೇ ಅದಿರಲಿ ಬನ್ನಿ ಈ ಇಲಿಯು ಸೇರಿಕೊಂಡಿದ್ದನ್ನಾ ಸನನ್ನು ನೋಡುವ.

ಆ ಕೊಟಡಿಗಳಿಂದ ಮುಂದೆ ಇದ್ದ ಸ್ಥಳವನ್ನು ಪರೀಕ್ಷಿಸ ತೊಡಗುತ್ತಲೇ ಕೊನೆಯ ಭಾಗಕ್ಕೆ ಸುಮಾರು ಆರಡಿಗಳ ಹಿಂದೆ ಸಣ್ಣ ಚಾಪೆಯ ಬಾಗಿಲೊಂದು ಕಾಣಿಸಿತು. ಚಾಪೆಯ ಮಧ್ಯೆಯಿಂದ ಅಲ್ಪಸ್ವಲ್ಪ ಬೆಳಕು ಒಳಗೆ ಬರಲು ಅನುಕೂಲವಾಗಿದ್ದಿತು. ಬಾಗಿಲನ್ನು ತೆರೆದು ಒಳಕ್ಕೆ ಹೋದರೆ ಒಂದು ಚಿಕ್ಕ ಕಿರು ಮನೆ ಒಂದು ಚಿಕ್ಕ ಮೇಜು. ಕುರ್ಚಿ ಆಹಾರ ಪದಾರ್ಥಗಳು, ನೀರು ಇವೆಲ್ಲವೂ ಅಲ್ಲಿದ್ದವು. ಕೆಲವು ಪುಸ್ತಕಗಳು ಮೇಜಿನ ಮೇಲೆ ಇತಸ್ತತಃ ಬಿದ್ದವು ಕೆಲವು ಕಾಗದಪತ್ರಗಳೂ ಅಲ್ಲಿ ಸಿಕ್ಕಿದವು ಅರಿಂದಮನು ಹೇಳತೊಡಗಿದನು-- ನೋಡಿದಿರಾ ಈ ಮನೆಯನ್ನು ಎಷ್ಟು ಚೆನ್ನಾಗಿ ಕಟ್ಟಿಸಿಕೊಂಡಿದ್ದಾನೆ. ಯಾರನ್ನಾ ತನ್ನ ಜೊತೆಗೆ

ಸೇರಿಸಿಕೊಳ್ಳದೇ ಅವಿತುಕೊಳ್ಳಲು ತಕ್ಕ ಉಪಾಯವನ್ನು ಕಲ್ಪಿಸಿಕೊಂಡಿದ್ದಾನೆ. ಆದರೆ ಆ ಮುದುಕಿಯೊಬ್ಬಳು ಇವನ ಅನುಗಾಮಿನಿಯಾಗಿರಬೇಕು. ಧೀರೇಂದ್ರ ಬಾಬುಗಳೇ ತಮ್ಮ ಬಂದಿಗಳ ಸಂಖ್ಯೆಗೆ ಆ ವೃದ್ಧೆಯನ್ನೂ ಸೇರಿಸೋಣಾಗಬೇಕು."

ಧೀರೇಂ— ಹಾಗೆಯೇಮಾಡುತ್ತೇನೆ. ಆದರೆ ಮಹಾಶಯ ತಮಗೆ ಈ ಸ್ಥಳ ವಿರುವುದು ಗೊತ್ತಾದುದು ಹೇಗೆ?

ಅರಿಂ— ಆನಂದನು ಈ ಮನೆಯಲ್ಲಿಯೇ ಅಡಗಿರುವನೆಂದು ನಿರ್ಧರಮಾಡಿ ಕೊಂಡೆನು. ಈ ಚಾಪೆಯಂತ್ರಿದ್ದ ಗೋಡೆಯನ್ನು ನೋಡುತ್ತಲೇ ನನ್ನ ಅನುಮಾನ ದೃಢವಾಯಿತು. ಬೆಂಕಿಯು ಹತ್ತಿ ಮನೆಯು ನಾಶವಾಗುತ್ತಿದೆಯೆಂದು ಕೇಳ ಬಂದರೆ ಅವನು ಒಳಗಿರುವ ಧೈರ್ಯವು ಬರದೆಂದು ತಿಳಿದುಕೊಂಡೆನು. ಒಳಕ್ಕೆಹೋಗಿ ಅವನನ್ನು ದಸ್ತಗಿರಿ ಮಾಡಬಹುದಾಗಿದ್ದಿತು. ಆದರೆ ಒಂದು ಸಣ್ಣ ನಾಟಕವನ್ನು ಆಡಿಸೋಣವೆಂದು ಆಶೆಯಾಯಿತು. ಅಲ್ಲದೇ ಈ ದಿನ ತಾವೂ ಸ್ವಲ್ಪ ಹಾಸ್ಯಮಾಡಿದ್ದಿರಿ. ತಮ್ಮನ್ನೂ ಸ್ವಲ್ಪ ಹಾಸ್ಯ ಪಡಿಸೋಣವೆನ್ನಿಸಿತು.

ಧೀರೇಂ— ಚೆನ್ನಾಗಿ ಪರಿಹಾಸ್ಯ ಮಾಡಿದಿರಿ. ಅದಿರಲಿ ಅವನು ಮನೆಯಲ್ಲಿಯೇ ಇರುವನೆಂದು ಹೇಗೆ ನಿರ್ಧರಿಸಿದಿರಿ?

ಅರಿಂ— ಹೆಬ್ಬೆಟ್ಟಿನಗುರುತನ್ನು ನೋಡಿದವರೆಲ್ಲ ಅದನ್ನು ನೋಡಿ ಎಲ್ಲವೂ ಮುಗಿಯಿತೆಂದು ಎಲ್ಲರೂ ಹೇಳಿದರು. ಅಹುದು ಮುಗಿಯಿತೆಂದು ಬೇರೆ ವಿಧವಾಗಿ ನಾನೂ ಹೇಳಿದೆನು. ಆ ಗುರುತು ಹಿಂದಿನ ದಿನ ನಾನು ಪರೀಕ್ಷೆ ಮಾಡಿದಾಗ ಖಂಡಿತವಾಗಿಯೂ ಅಲ್ಲಿರಲಿಲ್ಲ. ಇಂತಹ ಚಿಕ್ಕ ಗುರುತುಗಳಿಂದಲೇ ಮೋಕದ್ದಮೆಯು ಪತ್ತೆಯಾಗುವುದು ಸಂಭವ. ಅದೂ ಆರಾತ್ರಿ ಗುರುತು ಮಾಡಲ್ಪಟ್ಟಿತು

ಧೀರೇಂ— ಅದು ಹೇಗೆ?

ಅರಿಂ— ಬಹು ಸುಲಭವಾಗಿ ತಮಗೂ ಈಗ ತಿಳಿಯುವುದು ಕೇಳಿ. ಆ ಕಾಗದ ಪತ್ರಗಳನ್ನು ಮೊಹರು ಮಾಡುವಾಗ ಮಯಣದ ಮೇಲೆ ನಿಶಾಕಾಂತನ ಹೆಬ್ಬೆಟ್ಟನ್ನು ಒತ್ತಿಸಿದ್ದಾನೆ ಆ ಹುಡುಗನು ಇದೆಲ್ಲವೂ ಸ್ವಾಭಾವಿಕವಾದುದರಿಂದ ಆ ವಿಷಯವನ್ನೇ ಮರೆತುಬಿಟ್ಟಿದ್ದಾನೆ ತಾನೇ ಹೆಬ್ಬೆಟ್ಟನ್ನು ಒತ್ತಿ ಕಾಗದ ಪತ್ರಗಳನ್ನು ಮೊಹರು ಮಾಡಿದುದು ನೆನಪಿನಲ್ಲೇ ಇಲ್ಲ. ಅವನು ಅದನ್ನು ವ್ಯಕ್ತಪಡಿಸಿಯೂ ಇಲ್ಲ. ಆನಂದನಿಗೆ ಕೂಡಾ ಅದರ ನೆನಪಿತ್ತೋ ಇಲ್ಲವೋ ಹೇಳಲಸಾಧ್ಯವಾಗಿದೆ. ತನ್ನ ಗುಪ್ತಸ್ಥಾನದಲ್ಲಿ ಕುಳಿತು ಅವನು ಯೋಚನೆಗಳನ್ನು ಮಾಡುತ್ತೇ ಮಾಡುತ್ತೇ ಮಯಣದ ಮೇಲಿನ ಗುರುತನ್ನೂ ಅದು ಒಣಗಿರುವುದನ್ನೂ ಅದು ಈಗೆಷ್ಟು ಉಪಯೋಗವಾಗಬಹುದೆಂಬವನ್ನು ಯೋಚಿಸಿಕೊಂಡಿದ್ದಾನೆ. ತನ್ನ ಬೆರಳಿನಿಂದ ಸ್ವಲ್ಪ ರಕ್ತವನ್ನು ತೆಗೆದು ಮಯಣಕ್ಕೆ ಹಚ್ಚಿ ರಾತ್ರಿಯಲ್ಲಿ ಬಂದು ಈ ಗೋಡೆಯ ಮೇಲೆ ಗುರುತಿನ ಮಯಣವನ್ನು ಒತ್ತಿದ್ದಾನೆ. ಅಲ್ಲಿ ಹೆಬ್ಬೆಟ್ಟಿನಂತೆಯೇ ರಕ್ತಕಲೆಯಿಂದ ಗುರುತಾ

ಗಿವೆ. ಇವನ ಮನೆಯಲ್ಲಿನ ವೃದ್ಧೆಯು ಇವನಿಗೆ ಸಹಾಯಮಾಡಿದ್ದಾಳೆ. ಇವನ ಗುಹೆಯಲ್ಲಿ ಹುಡುಕೋಣಾಗಲಿ. ಯಾವುದೋ ಪತ್ರವನ್ನು ಮೊಹರುಮಾಡಿದಾಗ ನಿಶಾಕಾಂತನ ಹೆಬ್ಬೆಟ್ಟಿನ ಗುರುತಿನ ಮುದ್ರೆಇದೆ

ಧೀರೇಂ— ಈಗೆಲ್ಲವೂ ಸ್ಫಟಿಕಶಿಲೆಯಂತೆ ಸ್ವಚ್ಛವಾಗಿ ತಿಳಿಯುತ್ತವೆ. ಆದರೆ ಇಷ್ಟು ಮೋಸಮಾಡಲು ಕಾರಣವೇನು ?

ಅರಿಂ— ಅದನ್ನು ಹೇಳಲು ಅಷ್ಟು ಕಷ್ಟವೇನೂ ಇಲ್ಲ. ಮಹಾ ದಗಾಖೋರ ನಾದ ಮನುಷ್ಯನಾಗಿದ್ದಾನೆ ಈ ಆನಂದ ಮಹಾಶಯನು ನಿಶಾಕಾಂತನ ತಾಯಿಯನ್ನು ಇವನು ಮದುವೆ ಯಾಗಬೇಕೆಂದಿದ್ದುದನ್ನು ತಾವು ಬಲ್ಲಿರಷ್ಟೇ? ಏನು ತಾನರಿಯರಾ? ಅಹುದು ಮರತೆ ಆದಕ್ಕೆ ನಾನು ಹೇಳಿದುದು ಮೊದಲು ಹರಪುರ ಗ್ರಾಮಕ್ಕೆ ಹೋಗ ಬೇಕೆಂದು. ಆಕೆಯು ಕಾರಣಾಂತರದಿಂದ ಇವನನ್ನು ಮದುವೆಯಾಗಲಿಲ್ಲ .ಇವನು ಪುನಃ ಮದುವೆಯಾಗಲೇಇಲ್ಲ ಆಕೆಯು ನಿಶಾಕಾಂತನ ಪಿತೃವನ್ನು ಮದುವೆಯಾ ದಳು. ಆವರಾ ಈ ಕಪಟಿಯ ಕ್ರೂರಸ್ವಭಾವವು ತನ್ನ ಸೇಡುತೀರಿಸಿಕೊಳ್ಳ ಬೇಕೆಂದು ಬಯಸುತ್ತಿದ್ದಿತು. ಹೀಗಿರುವಲ್ಲಿ ಇವನಿಗೆ ವ್ಯಾಪಾರದಲ್ಲಿ ಹಣವೂ ನ್ಯಯ ವಾಗಿ ಹೋಗುವಕಾಲ ಪ್ರಾಪ್ತವಾಗಿತು. ತಾನು ದ್ರವ್ಯ ಹೀನನಾಗುವ ಸಂಭವವುಂಟಾ ಯಿತು. ಆಗ ತನ್ನಲ್ಲಿದ್ದ ಹಣವನ್ನೆಲ್ಲಾ ಚೆಕ್ಕುಗಳ ಮೂಲಕ ರಮಾಕಾಂತನೆಂಬುವ ನೊಬ್ಬನಿಗೆ ಕಳುಹುತ್ತಾ ಬಂದಿದ್ದಾನೆ. ಆ ರಮಾಕಾಂತನಾದರೂ ವೇಷಧಾರಿಯಾದ ಆನಂದನೇ ಇದ್ದಿರಬೇಕು. ಇವನೇ ಹೋಗಿ ತನ್ನ ಹಣವನ್ನು ತಾನೇ ತೆಗೆದುಕೊಂಡು ಬೇರೊಂದು ಹೆಸರಿನಲ್ಲಿ ಬೇರೊಂದು ಪಟ್ಟಣದಲ್ಲಿ ಒಂದೆರಡು ದಿನಗಳಿದ್ದು ಬಂದುಬಿಡು ತ್ತಿದ್ದಾನೆ. ಈ ಚೆಕ್ಕುಗಳಿನ್ನೂ ನನಗೆ ದೊರತಿಲ್ಲ ನಾವು ಚೆನ್ನಾಗಿ ಹುಡುಕಿದರೆ ಹೀಗೆ ಆನಂದನ ಹೆಸರಿನಿಂದ ರಮಾಕಾಂತನಿಗೆ ವರ್ಗಾಯಿಸಲ್ಪಟ್ಟ ಹಣವೆಲ್ಲವೂ ಯಾವುದೋ ಬ್ಯಾಂಕಿನಲ್ಲಿ ಠೇವಣಿಯಾಗಿ ಇರಿಸಲ್ಪಟ್ಟಿರುವುದು ವ್ಯಕ್ತವಾಗಬಹುದು. ಅವನು ಹೆಸರನ್ನು ಮಾರ್ಪಡಿಸಿಕೊಂಡು ಇದ್ದ ಹಣವನ್ನೆಲ್ಲಾ ತನಗಾಗಿ ಉಳಿಸಿಕೊಂಡು ಸಾಲಗಾರರಿಗೆ ಮೋಸ ಮಾಡುವ ಯೋಚನೆಮಾಡಿದ್ದಾನೆ. ಬೇರೆ ಪಟ್ಟಣದಲ್ಲಿ ಹಣದಿಂದ ಸುಖ ವಾಗಿ ಕಾಲಕಳೆಯುವ ಪ್ರಯತ್ನಮಾಡಿದ್ದಾನೆ

ಧೀರೇಂ-- ಇವೆಲ್ಲವೂ ಸಂಭವವೇಸರಿ

ಅರಿಂ--- ತಾನು ಓಡಿಹೋಗುವಾಗ ತನ್ನನ್ನು ಯಾರೂ ಹಿಂಬಾಲಿಸ ಬರದಂತೆ ತಕ್ಕ ಉಪಾಯಮಾಡಿದ್ದಾನೆ. ಹಾಗೆಯೇ ತನ್ನ ಪೂರ್ವ ಪ್ರಣಯಿಯಾದ ನಿಶಾಕಾಂ ತನ ತಾಯಿಯ ಮೇಲೆ ಸೇಡುತೀರಿಸಿಕೊಳ್ಳಲು ಪ್ರಯತ್ನಪಟ್ಟಿದ್ದಾನೆ. ಬಹಳ ಬುದ್ಧಿ ವ್ಯಯಮಾಡಿ ಇಂತಹ ದುಷ್ಕೃತ್ಯಕ್ಕೆ ಕೈ ಹಾಕಿದ್ದಾನೆ. ಉಯಿಲಿನ ಯೋಚನೆ, ಅದರಿಂದ ನಿಶಾಕಾಂತನು ತನ್ನನ್ನು ಕೊಲ್ಲಲು ಕಾರಣವುಂಟಾಗುವಿಕೆ ಅವನು ತನ್ನ ಮಾತಾಪಿತೃಗಳಿಗೆ ತಿಳಿಸದೇ ಬರುವುದು, ದೊಣ್ಣೆಯನ್ನು ಅಲ್ಲಿಯೇಬಿಡುವುದು ರಕ್ತ

ಸಿಕ್ಕಿವಾದ ಕಲೆಗಳೂ, ಉರಿಯುತ್ತಿದ್ದ ಮರದತುಂಡುಗಳ ಕಡೆಯಿಂದ ಬಂದ ದೇಹ ಸಂಬಂಧವಾದ ವಾಸನೆ, ಅಲ್ಲಿ ಸಿಕ್ಕಿದ ಷರಾಯಿಯಗುಂಡಿಗಳು, ಇವೆಲ್ಲವನ್ನೂ ಬಹಳ ಚಮತ್ಕಾರವಾಗಿ ಹೊಂದಿಸಿದ್ದಾನೆ. ಆದರೆ ಅಷ್ಟಕ್ಕೆ ತನ್ನ ಮಾಯಾಜಾಲವನ್ನು ನಿಲ್ಲಿಸಲಿಲ್ಲ. ನಿಲ್ಲಿಸಿದ್ದರೆ ಇದನ್ನು ಭೇದಿಸುವುದು ಅಸಾಧ್ಯವಾಗುತ್ತಿದ್ದಿತು. ಈ ವೇಳೆಗೆ ನಿಶಾಕಾಂತನನ್ನು ಗಲ್ಲಿಗೆ ಹಾಕಿಬಿಡುತ್ತಿದ್ದರು. ತಾನುಮಾಡಿದ್ದ ಕಾರ್ಯ ವನ್ನು ಮತ್ತಷ್ಟು ಬಲಪಡಿಸಲು ಹೋಗಿ ಸಿಕ್ಕಿಬಿದ್ದನು. ತನ್ನ ವೈರಿಯ ಕೊರಲಿಗೆ ಸುತ್ತಿದ್ದ ಪಾಶವನ್ನು ಮತ್ತಷ್ಟು ಬಲಪಡಿಸ ಹೋಗಿ ತಾನೇ ಸಿಕ್ಕಿಬಿದ್ದನು. ಈಗ ಬರೋಣಾಗಲಿ, ನಮ್ಮ ಮಿತ್ರನನ್ನು ಒಂದೆರಡು ಪ್ರಶ್ನೆಗಳನ್ನು ಕೇಳಬೇಕಾಗಿದೆ

ಎಲ್ಲರೂ ಆನಂದನಿದ್ದ ಸ್ಥಳಕ್ಕೆ ಬಂದರು. ಪೋಲೀಸರಿಬ್ಬರು ಅವನ ಬಳಿ ನಿಂತಿದ್ದರು. ಅವನು ಎಲ್ಲರೂ ಬರುತ್ತಲೇ "ಮಹಾಶಯರೇ! ನಾನು ವಿನೋದ ಕ್ಕಾಗಿ ಮಾಡಿದುದೆಂದು ಹೇಳುತ್ತಿದ್ದರೂ ಕೇಳುವುದೇ ಇಲ್ಲನಲ್ಲಾ! ನಾನು ಕೆಲವು ದಿನ ಕಾಣಿಸದಂತೆ ತಪ್ಪಿಸಿಕೊಂಡರೆ ನೋಡೋಣವೆಂದು ಹೀಗೆ ಮಾಡಿದನಲ್ಲದೇ ಮತ್ತೇನೂ ಬೇರೆ ಇಲ್ಲ! ಪಾಪ! ಆ ಹುಡಗ! ನಿಶಾಕಾಂತನ ಕೂದಲನ್ನಾದರೂ ಯಾರೂ ಮುಟ್ಟಲು ಬಿಡುವವನಲ್ಲ! ಇನ್ನು ಕೆಲವು ನಿಮಿಷಗಳಲ್ಲಿ ನಾನೇ ಬಂದು ಎಲ್ಲರಹಸ್ಯ ವನ್ನೂ ಭೇದಿಸಿಬಿಡುತ್ತಿದ್ದೆನು" ಎಂದು ಮಿಂತಾಗಿ ವಿಕೃತ ಸ್ವರದಿಂದ ಕೂಗಿಕೊಳ್ಳು ತ್ತಿದ್ದನು. ಅಧಿಕಾರಿಗಳಾರೂ ಅವನ ಮಾತಿಗೆ ಕಿವಿಕೊಟ್ಟಂತೆ ತೋರಲಿಲ್ಲ. ಧೀರೇಂ ದ್ರನು ಅವನನ್ನು ನೋಡಿ, "ಮಹಾಶಯ! ತಾವು ಹೇಳುವುದೆಲ್ಲವೂ ಇರಲಿ. ಶೂನಿ ಮಾಷಲೆಕ್ಷಿ ಸಿದಿರೆಂದು ತಾವು ಬಂಧಿತರಾಗಿಲ್ಲವಿದ್ದರೂ ನೋಸಮಿತ್ರನನ್ನು ನಶೆ ಸಿದಿರೆಂದು ಆಪಾದಿತರಾಗಿರುವಿರಿ. ಠಾಣೆಗೆ ನಡೆಯಿರಿ" ಎಂದನು.

ಅರಿಂ --ಆನಂದಮಹಾಶಯ! ತಮಗೆ ಬಹಳ ಜನ ಸಾಲಗಾರರಿರುವರೇ!

ಆನಂದನು ಅವನನ್ನು ವಿಟ್ಟಿಸಿನೋಡಿ ಇನ್ನರೇನಂದನು.

ಅರಿಂ- ಮತ್ತೇನೂ ಇಲ್ಲ. ಅವರೆಲ್ಲರೂ ತಮ್ಮನ್ನು ಬಿಟ್ಟು ಮತ್ತೊಬ್ಬರನ್ನು ಹಿಡಿದು ಹಣ ಕೇಳಬೇಕೆಂದಿರುವರು?

ಆನಂದ-- ಯಾರನ್ನಾದರೂ ಕೇಳಲಿ

ಅರಿಂ - ಅವಾರೋ ರಮಾಕಾಂತಬಾಬುಗಳಂತೆ! ಅವರ ಹೆಸರಿನ ಹಣವ ನ್ನೆಲ್ಲಾ ಕಳಿಮ ಕೊಳ್ಳುವರು.

ಈಗಲೀಗ ಆನಂದನು ದಿಕ್ಕುಕೆಟ್ಟವನಂತಾಗಿ ಅರಿಂದಮನನ್ನು ಕೋಪದಿಂದ ನುಂಗಿಬಿಡುವವನಂತೆ ನೋಡಿದನು. ಒಡನೆಯೇ ಹುಚ್ಚನಂತೆ ಕೂಗಲಾರಂಭಿಸಿ ಇರಲಿ ನಿನಗೆ ಇದಕ್ಕೆ ತಕ್ಕದನ್ನು ಮಾಡುವೆನು ನಿನಗೆ ಬಹಳ ಋಣಿಯಾಗಿದ್ದೇನೆ ಒಂದು ದಿನ ಸಾಲವನ್ನೆಲ್ಲಾ ತೀರಿಸಿಕೊಳ್ಳುವೆನು ಎಂದನು.

ಅರಿಂ—ಆ ಭಯವೇನೂ ಇಲ್ಲ. ತಮ್ಮನ್ನು ಗಲ್ಲಿಗೇರಿಸದಿದ್ದರೆ ಕೆಲವು ವರ್ಷಗಳನಂತರವಾದರೂ ತಮಗೆ ಬೇಕಾದಷ್ಟು ಕೆಲಸವನ್ನು ಕೊಟ್ಟು ತಾವು ವ್ಯರ್ಥವಾಗಿ ಕಾಲಹರಣಮಾಡದಂತೆ ಮಾಡಲು ನಮ್ಮ ಧೀರೇಂದ್ರರು ಬಾಧ್ಯರಾಗಿದ್ದಾರೆ. ಅದಿರಲಿ ತಾವು ತಮ್ಮ ಹಳೇಯ ಷರಾಯಿಯನ್ನು ಬೆಂಕಿಯಲ್ಲಿ ಹಾಕಿದ್ದರಲ್ಲವೇ ?

ಆನಂದ—ಉತ್ತರ ಕೊಡಲಿಲ್ಲ.

ಅರಿಂ ಅದರಜೊತೆಗೆ ಮತ್ತೇನು ಹಾಕಿದ್ದೀರಿ ?

ಆನಂದನು ಪುನಃ ಮೌನದಿಂದಿದ್ದನು.

ಅರಿಂ— ಏಕೆ ? ಉತ್ತರಕೊಡಲಿಷ್ಟವಿಲ್ಲವೆ ? ಒಂದೆರಡು ನಾಯಿಗಳನ್ನೋ ಮೊಲಗಳನ್ನೋ ಯಮಪುರಿಗೆ ತಾವು ಕಳುಹಿಸಿದಿರೆಂದು ಭಾವಿಸಿಕೊಂಡರೆ ಆ ಮರದ ತುಂಡುಗಳ ಬಳಿ ಇದ್ದ ವಾಸನೆಯೂ ತಮ್ಮ ಕೋಟಡಿಯಲ್ಲಿನ ರಕ್ತದ ಕಲೆಗಳೂ, ಮೊಣ್ಣೆಯ ಮೇಲಿನ ರಕ್ತಕುರುಹುಗಳೂ ಬೂದಿಯರಾಶಿಯ ಮಧ್ಯೆ ಕಂಡು ಬಂದ ದೇಹಸಂಬಂಧವಾದ ವಸ್ತುಗಳೂ ಎಲ್ಲಿ ಬಂದುವೆಂದು ತಾನಾಗಿ ತಿಳಿಯುವುದು.

ಆನಂದನು ಮೌನವಾಗಿ ಕುಳಿತನು. ಪೋಲೀಸರು ಅವನನ್ನು ಹಿಡಿದೆಬ್ಬಿಸಿ ತನ್ನೊಡನೆ ಕರೆದುಕೊಂಡು ಹೋದರು. ಅರಿಂದಮನೂ ರಾಧಾನಾಥರೂ ಮನೆಗೆ ಬಂದರು.

---

## ಅವಶಿಷ್ಟವಾದುದು

ಮೇಲೆ ನಡೆದ ವಿದ್ಯಮಾನಗಳಾದ ಕೆಲವು ದಿನಗಳ ಬಳಿಕ ಮುದುಕ ಮುದುಕಿಯರಿಬ್ಬರು ಕಾರಾಗೃಹದಲ್ಲಿ ಮಾತನಾಡಿಕೊಳ್ಳುತ್ತಿದ್ದರು.

ಮುದುಕಿ- ನಾನು ಹೇಳಲಿಲ್ಲವೇ ? ನಿನ್ನಿಂದ ನಾನೂ ಕೆಟ್ಟೆ.

ಮುದುಕ— ಮುಸುಕನ್ನಿಟ್ಟುಕೊಂಡು ಮುಖವನ್ನು ಮುಚ್ಚಿಕೊಂಡುಹೋಗಿ ಹಣವನ್ನೆಲ್ಲಾ ವಶಪಡಿಸಿ ಕೊಳ್ಳುತ್ತಿದ್ದೆನಲ್ಲಾ ? ಎಲ್ಲವೂ ತಿಳಿದು ಹೋಯಿತು. ಮನೆಯಲ್ಲಾದರೆ ಯಾರೋ ಹೊಂಚಿ ಕೇಳುವರೆಂದು ಉದ್ಯಾನಕ್ಕೆ ಬಂದು ಅಲ್ಲಿ ಗುಟ್ಟಾಗಿ ನನ್ನ ಸಂಧಾನವನ್ನೆಲ್ಲಾ ನಿನ್ನೊಡನೆ ಹೇಳುತ್ತಿದ್ದೆ.

ಮುದುಕಿ— ಅರಿಂದಮನಿಂದ ನಿಸ್ತಾರವಿಲ್ಲೆಂದು ಹೇಳಲಿಲ್ಲವೆ ?

ಮುದುಕ— ಅವನು ಸಿಕ್ಕಲಿ. ಅವನ ಎಲಬುಗಳನ್ನು ಚೂರು ಮಾಡುವೆನು.

ಮುದುಕಿ- ಹೀಗೆಂಯೇ ದೈವಬಲ ವಿಲ್ಲದಿದ್ದರೆ ಜಯವಿಲ್ಲ? ದುಷ್ಕೃತ್ಯಕ್ಕೆ ದೈವಬಲವೆಂದಿಗೂ ಇಲ್ಲ.

ಇಬ್ಬರೂ ತಮಗೆ ನಿಯಮಿತವಾಗಿದ್ದ ಕೆಲಸದಲ್ಲಿ ಪ್ರವೃತ್ತರಾದರು. ಇವರ ಪರಿಚಯವಾಯಿತೆ? ಇವರೇ ನಮ್ಮ ಉಪಕ್ರಮಣಿಕೋಕ್ತರಾದ ಮುದುಕ ಮುದುಕಿಯರು— ಆನಂದ ಮತ್ತು ಅವನ ಪರಿಚಾರಿಕೆ—ವೃದ್ಧೆ !

## ಸಂಪೂರ್ಣಂ



## —★ ಕಾದಂಬರೀ ಸಂಗ್ರಹ ★—

( ಕನ್ನಡ ಮಾಸ ಪತ್ರಿಕೆ )

ಈ ಮಾಸ ಪತ್ರಿಕೆಯು ಆರಂಭವಾಗಿ ೩ ವರ್ಷವಾಯಿತು. ಆಗಿನಿಂದ ತಪ್ಪದೆ ಪ್ರತಿ ತಿಂಗಳೂ ನಡೆಯುತ್ತಲಿವೆ. ಹಿಂದಿನ ವರ್ಷದ ಬೈಂಡಾದ ಸಂಪುಟಗಳೆಲ್ಲವೂ ಮೈಸೂರು ವಿದ್ಯಾಭ್ಯಾಸದ ಇಲಾಖೆಯಿಂದ ಎಲ್ಲ ಹೈ, ನಾರ್ಮಲ್ ಮಿಡಲ್ ಸ್ಕೂಲುಗಳಿಗೆ T. B. C. 67 of 36-37 ರಲ್ಲಿ ಮಂಜೂರಾಗಿವೆ ಉಪಯುಕ್ತ ವಿವಿಧ ಗ್ರಂಥಗಳ ಕೆಲವು ಪ್ರತಿಗಳು ಮಾತ್ರ ಉಳಿದಿವೆ. ಬೆಲೆ ಒಂದೊಂದಕ್ಕೆ ೨ ೦ ೦ ತ್ವರೆ ಮಾಡಿ ತರಿಸಿಕೊಳ್ಳಿರಿ.

## —★ ಪ್ರ ಬೋ ಧ ★—

( ವರ್ಣಾಶ್ರಮದ ಸ್ವರಾಜ್ಯ ಸಂಘದಿಂದ ಹೊರಡುವ ಮಾಸ ಪತ್ರಿಕೆ )

ಇದು ಹೊರಟು ೩ ವರ್ಷವಾಯಿತು. ಧಾರ್ಮಿಕ ಲೇಖನಗಳೇ ತುಂಬಿವೆ ಸಂಪುಟ ೧ ಕ್ಕೆ ೧- ೦ ೦

## —★ ಅಧ್ಯಾತ್ಮ ರಾಮಾಯಣ ★—

ಈಶ್ವರನಿಂದ ಪಾರ್ವತಿಗೆ ಉಪದೇಶ ಮಾಡಲ್ಪಟ್ಟ ಈ ವೇದಾಂತ ಗ್ರಂಥದ ಕನ್ನಡ ತಾತ್ಪರ್ಯ ಸಹಿತವಾದ ಏಳು ಕಾಂಡಗಳೂ ಸೇರಿ ಬೈಂಡಾದ ಸಂಪುಟ ಒಂದಕ್ಕೆ ೬---೦- ೦

ಅರ್ಘನಿರ್ಣಯ ೧ ೮ - ೦ ★ ಶಿವಗೀತೆ ೧ ೨-೦

ನಮ್ಮ ವಿಳಾಸ - **ಎಡಿಟರ್**,
ಕಾದಂಬರೀ ಸಂಗ್ರಹ,
ಚಾಮರಾಜನಗರ

